# ಸಿದ್ಧಗಂಗಾ

ತುಮಕೂರು ಟೌನ್
ವೀರಶೈವ ಕೋ-ಆಪರೇಟಿ[illegible]ಬ್ಯಾಂಕ್ ಲಿಮಿಟೆಡ್.
ಪ್ರಾರಂಭೋತ್ಸವ [illegible]-11-8-1973.

ಶ್ರೀ ಶ್ರೀ ಗಳವರ ಅಧ್ಯಕ್ಷತೆಯಲ್ಲಿ ತುಮಕೂರಿನಲ್ಲಿ ರಾಜ್ಯಪಾಲ ಗೋವಿಂದ ನಾರಾಯಣ್ ಅವರು ವೀರಶೈವ ಸಹಕಾರ ಬ್ಯಾಂಕ್‌ನ ಪ್ರಾರಂಭೋತ್ಸವ ನೆರವೇರಿಸಿದರು. ಶ್ರೀಮತಿ ಚಂದ್ರಗೋವಿಂದ ನಾರಾಯಣ್ ಅವರು ಭಾಗವಹಿಸಿದ್ದರು.

ಚಿತ್ರದಲ್ಲಿ ಬ್ಯಾಂಕಿನ ಪದಾಧಿಕಾರಿಗಳನ್ನು ಕಾಣಬಹುದು.

ಆಗಸ್ಟ್, ೧೯೭೩

# ‘ಸಿದ್ಧಗಂಗಾ’ ಚಿರಾಯುವಾಗಲೆಂದು

## ಹರಸಿ ಹಾರೈಸಿರುವ ಆಜೀವ ಸದಸ್ಯರ ಬಳಗ

465 ಶ್ರೀ ಆರ್. ಜಿ. ಗಂಗಣ್ಣ
ಕಂಟ್ರಾಕ್ಟರ್,
ರಾಂಪುರ, ಮೊಳಕಾಲ್ಮುರ ತಾ॥
ಚಿತ್ರದುರ್ಗ ಜಿಲ್ಲೆ.

466 ಶ್ರೀ ಜಿ. ತಿಮ್ಮರೆಡ್ಡಿ
ಜೆ.ಬಿ.ಹಳ್ಳಿ, ಮೊಳಕಾಲ್ಮುರ ತಾ॥
ಚಿತ್ರದುರ್ಗ ಜಿಲ್ಲೆ.

467 ಶ್ರೀ ಜಿ. ನಾಗಣ್ಣ
ಅಶೋಕ ಸಿದ್ದಾಪುರ,
ಮೊಳಕಾಲ್ಮುರ ತಾ॥
ಚಿತ್ರದುರ್ಗ ಜಿಲ್ಲೆ.

468 ಶ್ರೀ ಕೆ. ಕಾರಕಪ್ಪ
ರಾಂಪುರ, ಮೊಳಕಾಲ್ಮುರ ತಾ॥
ಚಿತ್ರದುರ್ಗ ಜಿಲ್ಲೆ.

469 ಶ್ರೀ ಸಿ. ಮಹಾಲಿಂಗಪ್ಪ
S/o ಚನ್ನರಾಯಪ್ಪ
ಬೀರಸಂದ್ರ
ತಿಪಟೂರು ತಾ॥ ತುಮಕೂರು ಜಿಲ್ಲೆ.

470 ಶ್ರೀ ಸಿ. ಕೆಂಪಯ್ಯ
S/o ಚಿಕ್ಕ ಕೆಂಪಯ್ಯ
ಸಿ. ಎಸ್. ಪುರ, ಗುಬ್ಬಿ ತಾ॥
ತುಮಕೂರು ಜಿಲ್ಲೆ.

471 ಶ್ರೀ ಡಿ. ಆರ್. ಕಮಲಾಕ್ಷರಪ್ಪ
ಅಸಿಸ್ಟೆಂಟ್ ಸರ್ಜನ್
ಜೆ. ಸಿ. ಹಾಸ್ಪಿಟಲ್
ಅರಸೀಕೆರೆ.

472 ಶ್ರೀ ಎಸ್. ಜಿ. ನಾಗರಾಜ್,
ಬಿ.ಎಸ್ಸಿ., ಬಿ.ಇ.,
ಸದಾಶಿವ ನಗರ, ಬೆಂಗಳೂರು-6

473 ಶ್ರೀ ಜಂಬಿಗೆ ಶರಣಪ್ಪ
ಸೇಲ್‌ಟ್ಯಾಕ್ಸ್ ಪ್ರಾಕ್ಟೀಷನರ್
ದಾವಣಗೆರೆ.

474 ಶ್ರೀ ಆರ್. ಎಂ ನಂಜುಂಡಪ್ಪ
ಪಶುವೈದ್ಯ ಶಾಲಾ ಇನ್‌ಸ್ಪೆಕ್ಟರ್,
ತುರುವೇಕೆರೆ ತಾ॥ ತುಮಕೂರು ಜಿಲ್ಲೆ.

475 ಶ್ರೀ ಟಿ. ಎಂ. ರೇಣುಕಾರಾಧ್ಯ
ಉಪನ್ಯಾಸಕರು
ಸರ್ಕಾರಿ ಜೂನಿಯರ್ ಕಾಲೇಜ್,
ತುಮಕೂರು.

476 ಶ್ರೀ ಹೆಚ್. ರುದ್ರಪ್ಪ,
ಪಿ. ಇ. ಟೀಚರ್
ಶ್ರೀ ಬಸವೇಶ್ವರ ಪ್ರೌಢಶಾಲಾ,
ಸೋಲೂರು, ಮಾಗಡಿ ತಾ॥
ಬೆಂಗಳೂರು ಜಿಲ್ಲೆ.

477 ಶ್ರೀ ಎ. ಚಂದ್ರಯ್ಯ
ಶ್ರೀ ಬಸವೇಶ್ವರ ಪ್ರೌಢಶಾಲಾ
ಕೊಳಾಲ, ಕೊರಟಗೆರೆ ತಾ॥
ತುಮಕೂರು ಜಿಲ್ಲೆ.

478 ಆರ್. ಕೆ. ಹೊನ್ನಬಸವಯ್ಯ
ರಂಗೇನಹಳ್ಳಿ, ಮಾಗಡಿ ತಾ॥
ಬೆಂಗಳೂರು ಜಿಲ್ಲೆ.

(ಮುಂದುವರಿಯುತ್ತದೆ)



# ಶ್ರೀವಾಣಿ

ಭಾರತ ಖಂಡಕ್ಕೆ ಸ್ವಾತಂತ್ರ್ಯ ಲಭಿಸಿ ಮುವತ್ತೊಂದು ವರ್ಷಗಳು ಸಂದಿವೆ. ಈ ಸಂಪಾದಿಸಿದ ಸ್ವಾತಂತ್ರ್ಯದ ಪ್ರಯೋಜನವೇನು ? ಎಂಬ ಪ್ರಶ್ನೆ ಅರ್ಥವಾಗಬೇಕಾದರೆ ಸ್ವಾತಂತ್ರ್ಯ ಪೂರ್ವ ಇದ್ದ ಜೀವನ ವ್ಯವಸ್ಥೆಯನ್ನು ಅರ್ಥಮಾಡಿಕೊಂಡಾಗ ಮಾತ್ರ ಸಾಧ್ಯ. ಒಬ್ಬ ಆಂಗ್ಲ ವಿಚಾರವಾದಿ ಸ್ವಾತಂತ್ರ್ಯದ ಮೌಲ್ಯವನ್ನು ಕುರಿತು ಹೀಗೆ ವಿಚಾರ ಮಾಡಿದ್ದಾನೆ. “ಯಾವ ರಾಷ್ಟ್ರದಲ್ಲಿ ಸಂಪತ್ತು ಇದ್ದು ಅನುಕೂಲವು ಇದ್ದು, ಸ್ವಾತಂತ್ರ್ಯವಿರುವುದಿಲ್ಲವೋ ಅದು ಬಡ ರಾಷ್ಟ್ರವೆನಿಸುತ್ತದೆ. ಆದರೆ ಯಾವ ರಾಷ್ಟ್ರ ಸಂಪತ್ತಿಲ್ಲದೆ ಬಡತನದಿಂದ ಕೂಡಿದ್ದರೂ ಸ್ವಾತಂತ್ರ್ಯ ಪಡೆದು ಕೊಂಡಿರುತ್ತದೆಯೋ ಅದು ಸಂಪದ್ಭರಿತ ರ‍್ಆಷ್ಟ್ರವೆನಿಸುತ್ತದೆ.

ಪ್ರತಿಯೊಂದು ಪಶುಪಕ್ಷಿಗಳೂ ಕೂಡ ಸ್ವಾತಂತ್ರ್ಯವನ್ನು ಅಪೇಕ್ಷಿಸುತ್ತವೆ. ಎನ್ನುವುದಕ್ಕೆ ಒಂದು ನಡೆದ ಪ್ರಸಂಗ. ಒಮ್ಮೆ ಮೈಸೂರಿನ ದೊಡ್ಡ ಮಹಾರಾಜರು ಕಾಕನಕೋಟೆಯಲ್ಲಿ ಆನೆಗಳನ್ನು ಬಂಧಿಸಿದರು. ಅವುಗಳಲ್ಲಿ ಒಂದು ಸಲಗ ತನಗೆ ಸ್ವಾತಂತ್ರ್ಯ ಹೋಯಿತೆಂಬ ಭಾವನೆಯಿಂದ ಆಹಾರಾದಿಗಳನ್ನು ತೆಗೆದುಕೊಳ್ಳದೆ ಉಪವಾಸಮಾಡಿತು. ದಿನೇ ದಿನೇ ಕೃಶವಾಯಿತು. ಮಹಾರಾಜರು ಪ್ರತಿದಿನ ಬಂದು ನೋಡಿ ಅದಕ್ಕೆ ಪ್ರಿಯವಾದ ಅಹಾಶವನ್ನು ಕೊಡಲು ಅಪ್ಪಣೆ ಮಾಡಿದರು. ಆದರೂ ಅದು ಆಹಾರವನ್ನು ಒಲ್ಲದೆ ಉಪಸಾಸವನ್ನೇ ಮುಂದುವರಿಸಿತು ಹೀಗೆ ಹತ್ತು ದಿನ ಕಳೆದು ಹನ್ನೊಂದನೆಯ ದಿನ ತಾನು ಅಸುನೀಗಿತ್ತು. ಅದನ್ನು ಕಂಡ ಮಹಾರಾಜರಿಗೆ ಕಣ್ಣಲ್ಲಿ ನೀರೂರಿತು. ಆಗ ಅವರು ಒಂದು ಮಾತು ಹೇಳಿದರು. ‘ಎಲೈ ಗಜರಾಜ ! ಮನುಷ್ಯನಿಗಿಂತಲೂ ಕೂಡ ಸ್ವಾತಂತ್ರ್ಯದ ಬೆಲೆಯನ್ನು ನೀನು ಚೆನ್ನಾಗಿ ಅರ್ಥಮಾಡಿಕೊಂಡಿದ್ದೀಯೆ. ಬುದ್ಧಿಶಕ್ತಿಯಲ್ಲಿ ಪ್ರಾಣಿಗಳಿಗಿಂತಲೂ ಮೇಲಾದ ಮನುಷ್ಯ ಈ ಸ್ವಾತಂತ್ರ್ಯದ ಮೌಲ್ಯವನ್ನು ಅರ್ಥಮಾಡಿಕೊಂಡಿಲ್ಲವಲ್ಲಾ! ಎಂದು.

ಈ ಪ್ರಸಂಗ ಏನೇ ಇರಲಿ ಸ್ವಾತಂತ್ರ್ಯ ಅರ್ಥವತ್ತಾಗಬೇಕಾದರೆ, ದೇಶದ ಪ್ರತಿಯೋರ್ವ ವ್ಯಕ್ತಿಯೂ ದೇಶಪ್ರೇಮವನ್ನು ಬೆಳಸಿಕೊಂಡು, ಘನ ವ್ಯಕ್ತಿತ್ವವನ್ನು ರೂಪಿಸಿಕೊಂಡಾಗ ಮಾತ್ರ ಸಾಧ್ಯ. ಅದೇ ಅವನ ದೇಶಕ್ಕೆ ಶ್ರೇಷ್ಠ ಕೊಡುಗೆಯೂ ಆಗುತ್ತದೆ.

# ‘ಸಿದ್ಧಗಂಗಾ’

ಆಗಸ್ಟ್, ೧೯೭೮

ಸಂಪುಟ–೧೪ ಸಂಚಿಕೆ–೮




ಚಂದಾ ವಿವರ

ಆಜೀವ ಸದಸ್ಯತ್ವ: **151-00** ರೂ

ವಾರ್ಷಿಕ ಚಂದಾ: **10–00** ರೂ

## ಈ ಸಂಚಿಕೆಯಲ್ಲಿ



ಮುಖಪುಟ

ತುಮಕೂರಿನಲ್ಲಿ ವೀರಶೈವ ಬ್ಯಾಂಕ್ ಪ್ರಾರಂಭೋತ್ಸವ

### ಲೇಖಕರಲ್ಲಿ ಮನವಿ

‘ಸಿದ್ಧಗಂಗಾ’ ಲೇಖಕರಿಂದ ಧಾರ್ಮಿಕ, ಸಾಂಸ್ಕೃತಿಕ ಐತಿಹಾಸಿಕ ಹಾಗೂ ವೈಚಾರಿಕ ಲೇಖನಗಳು, ಸಣ್ಣಕಥೆ, ಕವನ, ನಗೇಹನಿ, ಪ್ರಬಂಧ ಇವುಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್‌ಸ್ಕೇಪ್ ಸೈಜಿನ 3 ಪುಟಗಳಿಗೆ ಮೀರದಂತಿದ್ದು, ಕಾಗದದ ಒಂದೇ ಮಗ್ಗುಲಲ್ಲಿ ಬರೆಯಲ್ಪಟ್ಟಿರಬೇಕು. ಅಸ್ವೀಕೃತ ಲೇಖನಗಳನ್ನು ಹಿಂದಿರುಗಿಸಲಾಗುವುದಿಲ್ಲ. ಸ್ವೀಕೃತ ಲೇಖನಗಳಿಗೆ ‘ಸಿದ್ಧಗಂಗಾ’ ಆಗಿಂದಾಗ್ಗೆ ನಿಗದಿಪಡಿಸಿಕೊಳ್ಳುವ ಸಂಭಾವನೆಯನ್ನು ನೀಡಲಾಗುವುದು. ಲೇಖನಗಳನ್ನು

“ಸಂಪಾದಕರು”

“ಸಿದ್ಧಗಂಗಾ” [ಕನ್ನಡ ಮಾಸ ಪತ್ರಿಕೆ]

ಶ್ರೀ ಸಿದ್ಧಗಂಗಾ ಕ್ಷೇತ್ರ-572131 ತುಮಕೂರು ಜಿಲ್ಲೆ.

ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

### ಚಂದಾದಾರರಲ್ಲಿ ಮನವಿ

ಹೊಸ ವರ್ಷದ ನಿಮ್ಮ ಚಂದಾ ನಂಬರ್ ಗುರುತಿಸಿ ಕೊಳ್ಳಿ. ಚಂದಾ ಅವಧಿ ಮುಗಿಯುವವರೆಗೆ ವಿಳಾಸ ಬದಲಾವಣೆ ಮತ್ತು ಇತರೆ ಬಗ್ಗೆ ವ್ಯವಹರಿಸುವಾಗ ನಿಮ್ಮ ವಿಳಾಸದ ಹಿಂಬದಿ ಇರುವ ಚಂದಾ ನಂಬರ್ ಅಥವಾ ಯಾರ ಮೂಲಕ ಸದಸ್ಯತ್ವ ಪಡೆದಿರುವಿರೋ ಆ ನಮ್ಮ ಪ್ರತಿನಿಧಿಗಳ ಹೆಸರನ್ನು ಸೂಚಿಸಿ ವ್ಯವಹರಿಸಿ.

ಚಂದಾ ಬಾಕಿ ಇರುವವರು ಸಂದಾಯ ಮಾಡಿ ‘ಸಿದ್ಧಗಂಗಾ’ ಮುನ್ನಡೆಗೆ ಸಹಕರಿಸಿ.

ಚಂದಾ ಅವಧಿ ಮುಗಿದಿರುವ ಮಾನ್ಯ ಓದುಗರು ಮುಂದಿನ ಸಾಲಿಗೆ ಮುಂದುವರಿಸಿಕೊಳ್ಳಬೇಕಾಗಿ ಪ್ರಾರ್ಥನೆ.

ಪ್ರಕಾಶಕರು

**‘ಸಿದ್ಧಗಂಗಾ’ ಮಾಸ ಪತ್ರಿಕೆ, ಸಿದ್ಧಗಂಗಾ ಮಠ–572131 ತುಮಕೂರು ಜಿಲ್ಲೆ.**

# ನವನೀತ

( ಸಂಸ್ಕೃತ ಶ್ಲೋಕಗಳ ಭಾವಾನುವಾದ )

**ಆಪತ್ಸು ಮಿತ್ರಂ ಜಾನೀಯಾತ್ ಯುದ್ಧೇಶೂರಂಧನೇಶುಚಿಂ ।**
**ಭಾರ್ಯಾಂ ಕ್ಷೀಣೇಷು ವಿತ್ತೇಷು ವ್ಯಸನೇಷು ಸಬಾಂಧವಾನ್ ॥**

ಕಷ್ಟದಲಿ ಮಿತ್ರನನು ಸಮರದಲಿ ಶೂರನನೂ,
ಹಣ ಕೂಡಿ ಬಂದಾಗ ಪ್ರಾಮಾಣಿಕ ವ್ಯಕ್ತಿಯನೂ,
ಬದುಕಿನಲಿ ಬಡತನವೂ ಬಂದಾಗ ಹೆಂಡತಿಯನೂ,
ಪರೀಕ್ಷಿಸಿ ತಿಳಿಯಬೇಕು ವ್ಯಸನದಲಿ ಬಂಧುಗಳನೂ.

❃ ● ❃

**ಯದಿನಾತ್ಮನಿ ಪುತ್ರೇಷು ನ ಚೇತ್ಪುತ್ರೇಷು ನಪ್ತೃಷು ।**
**ನತ್ವೇವತು ಕೃತೋಽ ಧರ್ಮಃ ಕರ್ತುರ್ಭವತಿ ನಿಷ್ಫಲಃ ॥**

ಅಧರ್ಮ ವ್ಯವಹಾರದಿಂದ ತನಗೆ ತಪ್ಪಿದರೆ ತೊಂದರೆಯು
ತನ್ನ ಮಕ್ಕಳಿಗೆ ತಪ್ಪದು ಅದರ ತೊಂದರೆಯು
ಮಗನಿಗೆ ತಪ್ಪಿದರೆ ಮೊಮ್ಮಕ್ಕಳು ಮರಿಮಕ್ಕಳ ಬಿಡದು
ಹಿಂದೆ ಮಾಡಿದ ಅಧರ್ಮ ಫಲವು ಫಲ ಕೊಡದೆ ಬಿಡದು.

❃ ● ❃

**ಯುಜ್ಯತೇ ವೇಷ್ಟನಂ ವಾಯೋಃ ಆಕಾಶಸ್ಯ ಚ ಖಂಡನಂ ।**
**ಗ್ರಥನಂ ಚ ತರಂಗಾಣಾಂ ಆಸ್ಥಾ ನಾಯುಷಿ ಯುಜ್ಯತೇ ॥**

ಗಾಳಿಯನು ಬಂಧಿಸಬಹುದು ಸುತ್ತುವಿಕೆಯಿಂದ
ಆಕಾಶವನಾದರೂ ಕತ್ತರಿಸಬಹುದು ಪ್ರಯತ್ನದಿಂದ
ಮಾಡಬಹುದು ಸಮುದ್ರದ ಅಲೆಗಳ ಪೋಣಿಕೆ
ಆದರೆ ಇಡಲಾಗದು ಆಯುಸ್ಸಿನಲ್ಲಿ ನಂಬಿಕೆ.

❃ ● ❃

—ಕಾವ್ಯ ಸುಧಾಪ್ರಿಯ

# ಅಮೃತ ಬಿಂದು

“ಸ್ವಾತಂತ್ರ್ಯವೆಂದರೆ ಹೊಣೆಗಾರಿಕೆ, ಆದುದರಿಂದಲೇ ಬಹುಜನರು ಅದರ ಬಗೆಗೆ ಭಯಪಡುತ್ತಾರೆ” ಇದು ಬರ್ನಾರ್ಡ್‌ಷಾನ ಸ್ವಾತಂತ್ರ್ಯದ ಬಗೆಗಿನ ಅಭಿಪ್ರಾಯ. ಭಾರತೀಯರಾದ ನಾವು 1947 ರಿಂದಲೂ ವರ್ಷಂಪ್ರತಿ ಆಗಷ್ಟ 15ರಂದು ಸ್ವಾತಂತ್ರ್ಯದ ದಿನೋತ್ಸವವನ್ನು ಉತ್ಸುಕತೆಯಿಂದ ಆಚರಿಸುತ್ತಾ ಬಂದಿದ್ದೇವೆ. ಈ ಉತ್ಸವದಲ್ಲಿ ಎಷ್ಟು ಉತ್ಸುಕರಾಗಿದ್ದೇಯೋ ಗಳಿಸಿದ್ದನ್ನ ಉಳಿಸಿಕೊಳ್ಳ ಬೇಕೆನ್ನುವ ಹೊಣೆಗಾರಿಕೆಯಲ್ಲಿಯೂ ಉತ್ಸುಕರಾಗ ಬೇಕಾಗುತ್ತದೆ. ಸ್ವಾತಂತ್ರ್ಯವನ್ನು ಗಳಿಸಿ ಮೂವತ್ತೊಂದು ವರ್ಷಗಳು ಸಂದಿದ್ದರೂ, ಮಹಾತ್ಮ ಗಾಂಧೀಜಿಯವರ ನೇತೃತ್ವದಲ್ಲಿ ಸಂಪಾದಿಸಿದ ಸ್ವಾತಂತ್ರ್ಯ ಅರ್ಥವತ್ತಾಗಲು ಎಷ್ಟರ ಮಟ್ಟಿಗೆ ಹೊಣೆಗಾರಿಕೆಯನ್ನು ಹೊತ್ತಿದ್ದೇವೆ ಎಂಬುದನ್ನು ವಿಚಾರಮಾಡಬೇಕಾಗಿದೆ. ನಮ್ಮ ಭೂಮಿಯನ್ನು ನಾವು ಎಷ್ಟರ ಮಟ್ಟಿಗೆ ಆರ್ಥಿಕ, ಸಾಮಾಜಿಕ, ರಾಜಕೀಯ ಮತ್ತು ಆಧ್ಯಾತ್ಮಿಕವಾಗಿ ಪ್ರಗತಿಯನ್ನು ಸಾಧಿಸಿದ್ದೇವೆ, ರಾಷ್ಟ್ರದ ಅಭಿವೃದ್ಧಿಯಲ್ಲಿ ನಮ್ಮ ಕಾಣಿಕೆ ಯಾವ ಪ್ರಮಾಣದಲ್ಲಿ ಅರ್ಪಿತವಾಗಿದೆ ಎನ್ನುವದನ್ನು ಪರ್ಯಾಲೋಚಿಸುವ ಸಂದರ್ಭ ಇದಾಗಿದೆ. ಇಂದು ನಮ್ಮ ಮುಂದೆ ಮತ್ತು ಇಡಿಯ ದೇಶದ ಮುಂದೆ ನಿಂತಿರುವ ಸಮಸ್ಯೆಗಳ ಪರಿಹಾರಕ್ಕಾಗಿ ಹಿಂದಿನಸಾಧನೆಗಳನ್ನು ನೆನಪು ಮಾಡಿಕೊಂಡು ಮುಂದಿನ ಯೋಚನೆ ಯೋಜನೆಗಳನ್ನು ರೂಪುಗೊಳಿಸಿಕೊಂಡು ಅಮಿತ ಶ್ರದ್ಧೋತ್ಸಾಹಗಳಿಂದ ಕಾರ್ಯ ತತ್ಪರರಾಗುವ ಪ್ರಮುಖ ಹೊಣೆಯನ್ನು ಸರ್ವರೂ ಹೊರಬೇಕಾದದ್ದೇ ಸ್ವಾತಂತ್ರ್ಯೋತ್ಸವ.

— ದುಂಬಿ’

# ಕಾಕತೀಯ ವೀರಶೈವ ಸಾಮ್ರಾಜ್ಯ

## (ಕ್ರಿ. ಶ. 1199–1326)

—ಬಿ. ವಿ. ಶ್ರೀನಿವಾಸರಾವ್

ಕರ್ನಾಟಕ ಪ್ರಾಂತ ರಚನಾ ಸಮಿತಿ ಮಾಜಿ ಮ್ಯಾನೇಜರ್ ಮತ್ತು ಕೆ. ಜಿ. ಎಫ್. ಪ್ರಥಮ ದರ್ಜೆ ಕಾಲೇಜಿನ ಇತಿಹಾಸ ವಿಭಾಗದ ರೀಡರ್ ಆಗಿರುವ ಬಿ. ವಿ. ಶ್ರೀನಿವಾಸರಾವ್‌ರವರು ವಿಜಯನಗರ ಸಾಮ್ರಾಜ್ಯ, ಕರ್ನಾಟಕ ಪ್ರಾಂತರಚನೆ, ಕನ್ನಡ ಸಂಸ್ಕೃತಿ, ಕಲೆ, ಸಾಹಿತ್ಯ ಮುಂತಾದ ವಿಷಯಗಳ ಬಗ್ಗೆ ಕನ್ನಡದಲ್ಲಿ ನೂರಕ್ಕೂ ಮಿಗಿಲಾದ ಲೇಖನಗಳನ್ನು ಅನೇಕ ಪತ್ರಿಕೆಗಳಲ್ಲಿ ಪ್ರಕಟಿಸಿದ್ದಾರೆ. ಶ್ರೀಯುತರು ನಿರತಂರ ಸಂಶೋಧನಾ ಶೀಲರು. ಪ್ರಕೃತ ಕಾಕತೀಯ ವೀರಶೈವ ಸಾಮ್ರಾಜ್ಯದ ಇತಿಹಾಸವನ್ನು ತಿಳಿಯಪಡಿಸಿದ್ದಾರೆ.

ಭಾರತದ ಇತಿಹಾಸದಲ್ಲಿ ಕಾಕತೀಯ ವೀರಶೈವ ಸಾಮ್ರಾಜ್ಯವು ಅತ್ಯುನ್ನತ ಖ್ಯಾತಿಗಳಿಸಿದೆ. ಈ ಕಾಕತೀಯರು ಮೊದಲಿಗೆ "ಕಾಗತಿ" ಎಂಬ ಗ್ರಾಮದವರು. ಆದಕಾರಣ ಅವರಿಗೆ ಕಾಗತಿ ಎಂಬ ಅಡ್ಡ ಹೆಸರು ಬಂದಿದೆ ಗ್ರಾಮ ಕರ್ನಾಟಕದ ಕಾಶ್ಮೀರ ಎನಿಸಿಕೊಳ್ಳುವ ಬೆಳಗಾಂಗೆ ನಾಲ್ಕು ಮೈಲಿಗಳ ದೂರದಲ್ಲಿದೆ. ವೀರರಾಣಿ ಕಿತ್ತೂರು ಚನ್ನಮ್ಮನವರು ಈಗ್ರಾಮದ ದೇಸಾಯಿ ಮನೆತನದವರು. ಈಕಾಕತೀಯರು, ಕಲ್ಯಾಣ ಸಾಮ್ರಾಜ್ಯಕ್ಕೆ ಸಾಮಂತರಾಗಿದ್ದರು. ಈ ಕಾಕತೀಯ ಅರಸರಲ್ಲಿ ಗಣಪತಿ [1199ರಿಂದ1262 ಕ್ರಿ.ಶ||ದವರೆಗೆ] ರಾಣಿರುದ್ರಾಂಬ. (ಕ್ರಿ.ಶ 1262 ರಿಂದ 1295 ರವರಗೆ) ಪ್ರತಾಪರುದ್ರ (ಕ್ರಿ.ಶ 1295 ರಿಂದ 1326ರ ವರೆಗೆ) ಆಂಧ್ರಪ್ರದೇಶದಲ್ಲಿರುವ ವಾರಂಗಲ್ ಅಥವಾ ಏಕಶಿಲಾ ನಗರವನ್ನು ರಾಜಧಾನಿಯಾಗಿ ಮಾಡಿಕೊಂಡು. ವೀರಶೈವ ಸಂಸ್ಕೃತಿ ಉದ್ಧಾರ ಮಾಡಿದರು. ಇವರ ಮನೆದೇವರು ಕೊಲ್ಲಿಪಾಕೆಯ ಸೋಮೇಶ್ವರ ದೇವರು. ಇವರ ಪೂರ್ವಜರು ಅಥವಾ ಪೂರ್ವಿಕರು ಜೈನರು, ಆದರೆಈಕೆಳಕಂಡ ಆಧಾರಗಳಿಂದ ಮೇಲ್ಕಂಡ ಆರು ಕಾಕತೀಯ ಅರಸರಾದ ಗಣಪತಿ, ಅರಸಿ. ರುದ್ರಾಂಬೆ, ಮತ್ತು ಪ್ರತಾಪರುದ್ರರು ಜೈನಧರ್ಮದಿಂದ ವೀರಶೈವ ಧರ್ಮಕ್ಕೆ ಮತಾಂತರ ಹೊಂದಿದರು.

### ಸಾಹಿತ್ಯದ ಆಧಾರ :

ಕಾಕತೀಯ ಗ್ರಾಮದ ಮತ್ತು ಅಲ್ಲಿಯ ದೇಶಾಯಿ ಮನೆತನದ ಬಗ್ಗೆ ವಿಷಯಗಳನ್ನು ಕಿತ್ತೂರ ಚನ್ನಮ್ಮರಾಣಿ ವಿಷಯಗಳ ಸಾಹಿತ್ಯದಲ್ಲಿ ನೋಡಬಹುದು ಈರಾಣಿ ಈದೇಸಾಯಿ ಮನೆತನದಲ್ಲಿ ಹುಟ್ಟಿದವಳು. ರಾಘವಾಂಕನ ವೀರಭದ್ರ ವಿಜಯ, ರಾಘವಾಂಕ ಚರಿತ್ರೆ, ಪ್ರತಾಪರುದ್ರೀ ಸೋಮನಾಥನ ಆಂದ್ರ ಸಾಹಿತ್ಯ, ಚನ್ನಂಜೇಶನ ರಾಘವಾಂಕ ಕಾವ್ಯದ ಪ್ರಕಾರ ಕಾಕತೀಯ ಅರಸರಾದ ಗಜಪತಿ ರಾಯನ ಇತ್ತೀಚಿನವರೆಲ್ಲರೂ, ವೀರಶೈವರೆಂದು ಗೊತ್ತಾಗುತ್ತದೆ.

### ಶಾಸನಗಳ ಆಧಾರ :

ಮಾರ್ಕಾಪುರವು ಆಂದ್ರ ಪ್ರದೇಶದಲ್ಲಿದ್ದು ಹುಬ್ಬಳ್ಳಿ ವಿಜಯವಾಡ ರೈಲೆ ಲೈನಿನಲ್ಲಿದೆ- ದೋನಾಗಲ ಶ್ರೀ ಶೈಲರಾಜ ಮಾರ್ಗದಲ್ಲಿ ಬಸ್ವಾ ಪರ್ವತವನ್ನು ಏರುವಾಗ, ಪೂರ್ವದಿಕ್ಕಿನಲ್ಲಿ ನೋಡಿದಾಗ ತ್ರಿಪುರಾಂತಕ ದೇವಾಲಯ ಕಾಣುವುದು. ಅಲ್ಲಿಯಶಿಲಾಶಾಸನವು ಕನ್ನಡದಲ್ಲಿದೆ. ಧಾರವಾಡ ಜಿಲ್ಲೆಯ ಚೌಡಯ್ಯ ದಾನಾಪುರದ ಶಿಲಾಶಾಸನವೂ ಸಹ ಕನ್ನಡಲ್ಲಿದೆ. ಈಮೇಲ್ಕಂಡ ಎರಡು ಶಾಸನಗಳ ಪ್ರಕಾರ ಈಗಿನ ಚೌಡಯ್ಯ ದಾನಾಪುರದ ಒಡಯರವಂಶದ ಮೂಲ ಪುರುಷರಾದ ಮೊದಲನೆಯ ಶಿವದೇವ ಒಡೆಯರ್ ರವರು ಈಕಾಕತೀಯ ವೀರಶೈವ ಸಾಮ್ರಾಟರ ದೀಕ್ಷಾ ಗುರುಗಳು. ಗಣಪತಿ ರಾಯನಿಗೆ ಗಂಡುಸಂತಾನ ಇರಲಲ್ಲ. ರುದ್ರಾಂಬೆ ಎಂಬ ಮಗಳಿದ್ದಳು. ಗಣಪತಿ ನಂತರ ಸಿಂಹಾಸನಕ್ಕೆ ಯಾರು ಬರಬೇಕೆಂಬ ವಿವಾದ ಹುಟ್ಟಿತು. ಆಗ ರಾಜ ಗುರುಗಳಾದ ಶಿವದೇವ ಒಡಯರ್ ಮುಂದೆ ಬಂದು ಲಿಂಗವಂತ ಅಥವ ವೀರಶೈವ ಧರ್ಮದ ಪ್ರಕಾರ ಸ್ತ್ರೀಯರು, ಧಾರ್ಮಿಕ ಮತ್ತು



ಸಾಮಾಜಿಕ ಹಕ್ಕುಗಳು ಇರುವಕಾರಣ, ರಾಣಿ ರುದ್ರಾಂಬೆಗೆ ಆಶೀರ್ವಾದಮಾಡಿ, ಅವಳನ್ನು ಸಿಂಹಾಸನಕ್ಕೆ ಹತ್ತಿಸಿದರು. ಇವಳ ಮೊಮ್ಮಗನೇ ಪ್ರತಾಪರುದ್ರನು. ಇವನ ಕಾಲದಲ್ಲಿ ವೀರಶೈವ ಧರ್ಮ ಉನ್ನತ ಮಟ್ಟದಲ್ಲಿತ್ತು.

### ವಾಸ್ತುಶಿಲ್ಪದ ಆಧಾರ :

ಗಣಪತಿರಾಯನತಂದೆ ಪ್ರೋಲರಾಯನು ಆಗಾಗ್ಯೆ ಕಾರ್ಯಾರ್ಥವಾಗಿ, ಶರಣರ ತಾಣವಾದ ಕಲ್ಯಾಣಕ್ಕೆ ಬರುತ್ತಿದ್ದನು. ಪ್ರೋಲರಾಯನಿಗೆ ಮಹದೇವನೆಂದು ಮತ್ತೊಂದು ಹೆಸರಿತ್ತು. ಬಸವ ಕಲ್ಯಾಣದಲ್ಲಿ ಆಗಲೇ ಪ್ರಾರಂಭವಾಗಿದ್ದ ಲಿಂಗವಂತ ಧರ್ಮದ ಆಂದೋಳನಕ್ಕೆ ಒಳಪಟ್ಟ ತಾನು ಲಿಂಗವಂತ ಧರ್ಮವನ್ನು ಸ್ವೀಕರಿಸಿದನು. ಕಲ್ಯಾಣಕ್ಕೆ ಬಂದಾಗ್ಗೆ ತನ್ನ ವಸತಿಗಾಗಿ ತ್ರಿ ಪುರಾಂತಕ ಕೆರೆಯ ದಂಡೆಯ ಮೇಲೆ, ಒಂದು ವೀರಭದ್ರ ದೇವಾಲಯವನ್ನು ಕಟ್ಟಿಸಿದನು. ಈ ಪ್ರೋಲರಾಯನ ಮಗನೇ ಗಣಪತಿ ರಾಯನು. ಶಿವದೇವ ಒಡೆಯರು ಇವನಿಗೆ ದೀಕ್ಷಾ ಗುರುಗಳು, ತನ್ನ ರಾಜಧಾನಿಯಾದ ಓರಂಗಲ್ಲಿನಲ್ಲಿ ವೀರಭದ್ರ ದೇವಸ್ಥಾನ ಕಟ್ಟಿಸಿದನು. ಕೊಲ್ಲಿಪಾಕಿದೇವಾಲಯಕ್ಕೆ ಗಣಪತಿರಾಯನು ಸಹಸ್ರ ಸ್ಥಂಭಗಳ ಒಂದು ಮಂಟಪ ಕಟ್ಟಿಸಿದನು.

ಈ ಕಾಕತೀಯ ವೀರಶೈವ ಅರಸ ಅರಸಿಯರ ಸಹಾಯದಿಂದಲೇ, ರೇಣುಕಾದಿಗಳು ಶ್ರೀ ಶೈಲ ಕ್ಷೇತ್ರವನ್ನು ಸ್ವಾಧೀನ ಪಡಿಸಿಕೊಂಡರು. ಶ್ರೀ ಶೈಲ ಕ್ಷೇತ್ರ–ಪುಷ್ಕರಿಣಿಗೆ ಹೋಗುವ ದಾರಿಯ ಎಡಗಡೆಯ ದಿಕ್ಕಿನ ದೇವಾಲಯದ ಗೋಡೆಯ ಮೇಲೆ ಅಕ್ಕ ಮಹಾದೇವಿ ಚಿತ್ರವನ್ನು ಕೊರೆಸಿದವರು. ಈ ಕಾಕತೀಯ ವೀರಶೈವ ಅರಸರು.

ಕಲ್ಯಾಣದ ಕ್ರಾಂತಿ ಕಾಲದಲ್ಲಿ ಬಿಜ್ಜಳನ ಕೊಲೆಯು ಚಾಲುಕ್ಯರ ನೆಂಟನಾದ ಜಗದೇವನಿಂದ ಆದ ಅಪರಾಧವನ್ನು ಶರಣರ ಮೇಲೆ ಹೊರಿಸಿ ಅವರನ್ನು ಗುಂಡಿಟ್ಟು ಕೊಲ್ಲ ಬೇಕೆಂಬ ಅಪ್ಪಣೆಯಾಯಿತು. ಆದ್ದರಿಂದ ಶರಣರೆಲ್ಲರೂ ದಿಕ್ಕಾ ಪಾಲಾದರು. ಒಂದು ಗುಂಪು ಉಳವಿ ಕಡೆ ಹೋಯಿತು. ಇನ್ನೊಂದು ಗುಂಪು ಶ್ರೀ ಶೈಲದ ಕದಳಿ ವನದಲ್ಲಿ ಮರೆಹೋಯಿತು. ರಾಜ ಶಿವದೇವ ಒಡೆಯರು ಆಗಾಗ್ಯೆ ಕದಳೀ ವನಕ್ಕೆ ಬರುತ್ತಿದ್ದ ಈಗುಪ್ತ ನಿವಾಸಿಗಳನ್ನು ವೀರಶೈವ ಸಾಮ್ರಾಟರಿಗೆ, ಪರಿಚಯ ಮಾಡಿ ಕೊಟ್ಟಕಾರಣ ಆಗ ಸಾಮ್ರಾಟರು ಅವರಿಗೆ ಸಂರಕ್ಷಣೆಯ ಅಭಯ ಕೊಟ್ಟರು.

ಸಾಮ್ರಾಟರು ಕಲ್ಯಾಣದ ಕ್ರಾಂತಿಯ ಎಲ್ಲಾ ಸಂಗತಿಗಳನ್ನು ತಿಳಿದು, ಕದಳೀವನದ ಜ್ಯೋತಿರ್ಲಿಂಗ ದರ್ಶನಕ್ಕೆ ಎಲ್ಲರಿಗೂ ಅಸಾಧ್ಯವಾದ ಕಾರಣ, ಈಗಿನ ಶ್ರೀಶೈಲ ದೇವಸ್ಥಾನವನ್ನು ಅವರೇ ಕಟ್ಟಿಸಿದ್ದರು. ಈದೇವಸ್ಥಾನದ ಗೋಡೆಗಳ ಮೇಲೆ ಅನೇಕ ಪೌರಾಣಿಕ ಚಿತ್ರಗಳನ್ನು ಕೊರೆಸಿದ್ದರು. ಕದಳೀವನದ ಹತ್ತಿರ ಇರುವ ಅಕ್ಕನ ಗವಿಯ ಮುಂದೆ ಅಕ್ಕನ ಚರಿತ್ರೆಗೆ ಸಂಬಂಧಿಸಿದ ಸುಮಾರು ಹದಿನಾರು ಕಲ್ಲಿನ ಪುತ್ಥಳಿಗಳನ್ನು ಮಾಡಿಸಿ ಇಡಿಸಿದರು. ಈ ಕಾಕತೀಯ ವೀರಶೈವ ಅರಸರು ಮತ್ತು ಈ ಅಕ್ಕಮಹಾದೇವಿಯ ಗವಿಯ ಮುಂದೆ ಆವರಣದಲ್ಲಿ ಶರಣರಿಗೆ ಸಂಬಂಧಿಸಿದ ಶಿಲಾ ಪುತ್ಥಳಿಗಳನ್ನು ತಯಾರಿಸಿ ಅಲ್ಲಿ ಇಟ್ಟರು.

ಈಮೇಲ್ಕಂಡ ಸಂಗತಿಗಳನ್ನು ಪರಿಶೀಲಿಸಿ ಕಾಕತೀಯ ಅರಸರಾದ ಗಣಪತಿ ಅರಸಿರುದ್ರಾಂಬೆ, ಅರಸ ಪ್ರತಾಪರುದ್ರರು, ವೀರಶೈವ ಅರಸರೆಂದು ತೀರ್ಮಾನಿಸಿದೆ.

---

ರಾಷ್ಟ್ರೀಯ ಸ್ವಾತಂತ್ರ್ಯವು ವಿದೇಶಿಯರನ್ನು ಗೆದ್ದು ಅವರಿಂದ ಪಡೆದ ಬಿಡುಗಡೆ ಮಾತ್ರವೇ ಆಗಿದ್ದು, ಅದು ಜೀವಂತ ಮಿಥ್ಯವಾಗಿ ಉಳಿಯದೆ ಜೀವಂತ ಸತ್ಯವಾಗಿ ಉಳಿಯಬೇಕಾದರೆ, ತಮ್ಮ ಸ್ವಂತ ಘನತೆಯ ಪರಿಜ್ಞಾನವನ್ನು ಹೊಂದಿರುವ ವ್ಯಕ್ತಿಗಳ ಸಾಮೂಹಿಕ ದುಡಿಮೆ, ಉತ್ಸಾಹದ ಪ್ರೇರಕ ಶಕ್ತಿ ಮತ್ತು ಸ್ವಾರ್ಥ ತ್ಯಾಗದ ಸಾಮರ್ಥ್ಯ ಇವು ಅವಶ್ಯಕ.

—ಮ್ಯಾಜಿನಿ

---

# ಧೀರರ ರೋಮಾಂಚಕ ಸಾಹಸಗಳು

—ಎಂ. ಜಿ. ಕೆ. ಮೂರ್ತಿ

ಬಹು ಘೋರ ನೋವು, ಅಪಾಯಗಳನ್ನು ಧೈರ್ಯ, ಸ್ಥೈರ್ಯದಿಂದ ತಾಳಿದ ಸಾಹಸಿಗಳ ದೃಷ್ಟಾಂತಗಳು ಚರಿತ್ರೆಯಲ್ಲಿವೆ. ಅವರು ತಾವಾಗಿಯೇ ಅಪಾಯಗಳಿಗೆ ನುಗ್ಗಿ ಅವನ್ನು ಸಂತೋಷ, ಹೆಮ್ಮೆಯಿಂದ ಸಹಿಸಿದರು. ಎನ್ರಿಕೋ ಡಾನ್‌ಡೊಲೋ ಎಂಬಾತ ೬೬ನೇ ವಯಸ್ಸಿನಲ್ಲಿ ಪೂರ್ತಿ ಕುರುಡನಾಗಿ, ೮೬ ನೇ ವರ್ಷದಲ್ಲಿ ವೆನಿಸ್‌ನ ರಾಜನಾಗಿ ಚುನಾಯಿಸಲ್ಪಟ್ಟು, ೯೯ ನೇ ವಯಸ್ಸಿನಲ್ಲಿ ಬೈಸಾನಕ್ ರಾಜ್ಯದ ಮೇಲೆ ಯುದ್ಧ ಹೂಡಿ, ಎಂಟು ದಿನ ಸಾಮಾನ್ಯ ಸೈನಿಕನಂತೆ ದ್ವಂದ್ವ ಯುದ್ಧ ಮಾಡಿ, ಕೊನೆಗೆ ಕಾನ್‌ಸ್ಟಾಂಟಿನೋಪಲ್ ಪಟ್ಟಣದ ಕೋಟೆ ಗೋಡೆಯನ್ನೇರಿ ಆಪಟ್ಟಣವನ್ನು ಹಿಡಿದ ಅಮೇರಿಕದ ಕ್ರಾಂತಿಯಲ್ಲಿ ಬಹು ಶೂರನೆಂದು ವಿಖ್ಯಾತನಾಗಿದ್ದ ಮರ್ಫಿಯು ಶತ್ರು ಸೇನೆಯಿಂದ ಪಾರಾಗಲು ತನ್ನ ಮೇಲೆ ೧೨೫ ಅಡಿ ಎತ್ತರದಿಂದ ಗುಡುಗಿನ ಆರ್ಭಟದಲ್ಲಿ ಧುಮುಕುತ್ತಿದ್ದ ಒಂದು ಜಲಪಾತದ ಕೆಳಗೆ ಒಂದು ರಾತ್ರಿಯನ್ನು ಕಳೆದ. ರಾಬರ್ಟ್ ಪಿಯರಿ ಎಂಬ ಪ್ರಚಂಡ ಸಾಹಸಿ ಉತ್ತರ ಧ್ರುವನ್ನು ಸೇರಲು ೧೮ ವರ್ಷ ಕಾಲ ಏಳು ಸಾರಿ ಪ್ರಯಾಸಪಟ್ಟ. ಒಂದು ಸಾರಿ ಅವನ ಎಂಟು ಕಾಲ್ಬೆರಳುಗಳು ಹಿಮಕಚ್ಚಿನಿಂದ (frost bite) ನಾಶವಾದವು. ಇನ್ನೊಂದು ಸಾರಿ ಅವನ ಕಾಲು ಮುರಿಯಿತು, ಆದರೂ ಅಸಾಧ್ಯವೆನಿಸಿದ್ದ ಕಷ್ಟಪರಂಪರೆಗಳನ್ನೆಲ್ಲಾ ಜಯಿಸಿ, ಎಂಟನೆ ಸಾರಿ ವಿಜಯ ವೀರನಂತೆ ಉತ್ತರ ಧೃವದಲ್ಲಿ ಕಾಲಿಟ್ಟ.

ಒಂಲಿಪಿಕ್ ಪಂದ್ಯಾಟದಲ್ಲಿ ಸ್ಪರ್ಧಿಸಿದ ಲಾಸ್ತೆನಿಸ್ ಎಂಬುವನು ೧೮ ಮೈಲಿ ಓಟದಲ್ಲಿ ಒಂದು ಕುದುರೆಯನ್ನು ಸೋಲಿಸಿ, ಆ ವಾರ್ತೆಯನ್ನು ತನ್ನ ಊರಿಗೆ ತಿಳಿಸಲು ಕೂಡಲೇ ೬೮ ಮೈಲಿ ಓಡಿಹೋದ. ಮೆಕ್ಸಿಕೋ ಸೇನೆಯು ಸ್ಪೇನಿನ ಒಂದು ಕೋಟೆಯನ್ನು ದಾಳಿಮಾಡಿ ಫಿರಂಗಿಗುಂಡು ಹಾರಿಸುತ್ತಿದ್ದಾಗ ವಾಲ್ಡೀವಿಯೂ ಎಂಬ ಯೋಧನು ಆ ಕದನ ಮುಗಿಯುವವರೆಗೂ ೨೦೦ಪೌಂಡ್ ಭಾರದ ಫಿರಂಗಿಯನ್ನು ತನ್ನ ಬೆನ್ನಿನಮೇಲೆ ಬಂದೂಕಿನ ಗಾಡಿಯಂತೆ ಹೇರಿಸಿಕೊಂಡಿದ್ದ. ಸೈಸ್‌ಬರ್ಗ್‌ನ ರಾಜನಿಗೆ ಮೇಲೆ ಬೀಳಲು ನುಗ್ಗಿ ಬಂದ ಭೀಕರ ಕಡು ಹಂದಿಯನ್ನು ಬರೀ ಕೈಯಿಂದ ಅದರ ಕೊಂಬು, ಕೂದಲುಗಗಳನ್ನು ಹಿಡಿದು ಅಡಗಿಸುವಷ್ಟು ಪ್ರತಾಪವಿತ್ತು. ಜಾರ್ಜಿಯಾದ ಇಂಜನಿಯರ್ ಅನಾಟೊಲಿ ಡೆರ ಬರಾಸ್ವಿಲಿಯು ಚಳಿ ಶೂನ್ಯದ ಕೆಳಗೆ ೨೨ ಡಿಗ್ರಿ ಸೆಂಟಿಗ್ರೇಡ್ ಇದ್ದಾಗ, ಬಿರುಗಾಳಿಯನ್ನೆದುರಿಸಿ ಮೋಟಾರು ಸೈಕಲಿನಲ್ಲಿ ಕಾಕ್ಸಸ್ ಪರ್ವತದ 10,400 ಅಡಿ ಎತ್ತರದ ಶಿಖರವನ್ನೇರಿದ.

ಇಂಗ್ಲೇಂಡಿನಲ್ಲಿ ಎಡ್ವರ್ಡ್ ಸ್ಟೋಕ್ಸ್ ಪೂರ್ತಿ ಕುರುಡನಾಗಿ ಹೋದರೂ ಕುದುರೆ ಸವಾರಿ ಮಾಡಿಕೊಂಡು ಬೇಟೆ ನಾಯಿಗಳೊಡನೆ ಬೇಟೆಯಾಡುತ್ತಿದ್ದ; ದಾರಿಯಲ್ಲಿದ್ದ ವಿಘ್ನಗಳನ್ನು ಅವನ ಸಂಗಾತಿಯು ಗಂಟೆ ಬಾರಿಸಿ ಸೂಚಿಸಿದಾಗ, ಅವನು ಕುದುರೆಯನ್ನು ಹಾರಿಸಿ ಅವುಗಳನ್ನು ದಾಟುತ್ತಿದ್ದ ಮುನಿಯಸ್ ಸ್ಕವಾಲೊ ಎಂಬಾತ ತನ್ನ ಬಲ ತೋಳನ್ನು ಉರಿಯುತ್ತಿದ್ದ ಬೆಂಕಿಯೊಳಗೆ ಚಾಚಿ, ತೋಳು ಮೆಲ್ಲಗೆ ಉರಿದು, ಸೀದು, ಸಣ್ಣ ಮೋಟಾಗುವವರೆಗೂ ಬೆಂಕಿಯಲ್ಲಿಟ್ಟಿದ್ದ. "ರೋಮನ್ ವ್ಯಕ್ತಿ ಎಂಥ ನೋವನ್ನೂ ಲಕ್ಷ್ಯಕೊಡುವುದಿಲ್ಲವೆಂಬುದನ್ನು ಪ್ರದರ್ಶಿಸಿದ್ದೇನೆ" ಎಂದು ನಗುತ್ತಾ ಹೇಳಿದ. ನಾರ್ವೆದೇಶದಿಂದ ಆಸ್ಟ್ರೇಲಿಯಕ್ಕೆ ಒಂದು ಯಾಂತ್ರಿಕ ದೋಣಿಯಲ್ಲಿ ಸಮುದ್ರಯಾನ ಹೊರಟ ಜೇಮ್ಸ್ ಕುರ್ ಎಂಬಾತ ಬಿರುಗಾಳಿಗೆ ಸಿಕ್ಕಿಕೊಂಡು, ಪೆಟ್ರೋಲ್ ಇಲ್ಲದೆ, ಆಹಾರ ಮುಗಿದು ಹೋಗಿ ಹಸಿ ಮೀನನ್ನು ತಿನ್ನುತ್ತಾ, ಉಪ್ಪು ನೀರಿನಲ್ಲಿ ಚರ್ಮ ಒಡೆದು ನೋವಿನಿಂದ 4¾ ತಿಂಗಳ ಕಾಲ ಹೋದಾಗ, ದೋಣಿಯು ಅಲೆಗಳ ಹೊಡೆತದಿಂದ ಬಂಡೆಗೆ ತಗಲಿ ಒಡೆದು ಅವನು ಸಮುದ್ರದ ಪಾಲಾದ. ಆದರೂ ಅವನು ಎದೆಗೆಡದೆ ಈಜಿಕೊಂಡು ಹೋಗಿ ದೋಣಿಗೆ ಸೇರಿಸಿದ್ದ ರಬ್ಬರ್ ಡಿಂಗಿಯನ್ನು ಸೆಳೆದುಕೊಂಡು ಅದರಲ್ಲಿ ಕುಳಿತ ೧೨ ಮೈಲಿ ದೂರ ಹುಟ್ಟು ಹಾಕಿ ಒಂದು ದ್ವೀಪವನ್ನು ಸೇರಿದ.

೬೮ ವರ್ಷ ವಯಸ್ಸಿನ ಜೋಸೆಫ್ ಟ್ರಾಫರ್ಡ್ ಮೂರು ರಾತ್ರಿ ಮೂರು ಹಗಲು ಎಡೆಬಿಡದೆ ಅವನ ಹೊಸ ಜೋಡುಗಳು ಹರಿದು ಹೋಗಿ ಅವನ ಕಾಲುಗಳು ಹೊರಗೆ ತೂರಿ ಬರುವವರೆಗೂ ಗರಗರನೆ ತಿರಗುತ್ತಾ "ಮಾರಿಸ್" ನರ್ತನವನ್ನು ಮಾಡಿದ. ಥಾಮಸ್‌ಸ್ಟೈಸರ್ ಒಂದು ಕುದುರೆಯನ್ನೂ ಅದರ ಮೇಲಿದ್ದ ಮೂಟೆಗಳನ್ನು—ಒಟ್ಟು ೧೮೦೦ ಪೌಂಡು ಭಾರವನ್ನು ತನ್ನ ಬೆನ್ನಿನ ಮೇಲಿಟ್ಟುಕೊಂಡು ೬೬೦ ಅಡಿ ದೂರ ಸಾಗಿದ ಒಂದು ವಾರ ಹಗಲು-ರಾತ್ರಿ ಅವಿರತವಾಗಿ ಬೈಸಿಕಲ್ ಮೇಲೆ ಸವಾರಿ ಮಾಡಿದ ಸಾಹಸಿಗಳೂ ಇದ್ದಾರೆ. ೬ ಅಡಿ ೨ ಅಂಗುಲ ಎತ್ತರವಿದ್ದ ಗನ್ನಾರ್ ಎಂಬ ಯೋಧನು ಯುದ್ಧ ಕವಚ, ಕಾಳಗದ ಪೂರ್ಣ ಶಸ್ತ್ರಾಸ್ತ್ರಗಳನ್ನು ಧರಿಸಿ, ಮೇಲೆ ತನ್ನ ಎತ್ತರಕ್ಕೆ ಹಾರುತ್ತಿದ್ದ; ಮುಂದೆ ಎಷ್ಟು ದೂರ ಹಾರುತ್ತಿದ್ದನೋ ಅಷ್ಟೇ ದೂರ ಹಿಂದಕ್ಕೂ ಹಾರುತ್ತಿದ್ದ. ಮೇವಾಡದ ಮಹಾರಾಜ ಸಂಗ್ರಾಮ ಸಿಂಗನು ಯುದ್ಧದಲ್ಲಿ ಎಂಬತ್ತು ಸಾರಿ ಗಾಯ ಹೊಂದಿ ಒಂದು ಚಿನ್ನದ ಕಣ್ಣನ್ನೂ, ಒಂದು ಗಟ್ಟಿ ಚಿನ್ನದ ತೋಳನ್ನು, ಗಟ್ಟಿ ಚಿನ್ನದ ಒಂದು ಕಾಲನ್ನೂ ಪಡೆದಿದ್ದ.

ಸ್ವೀಡನ್ನಿನಲ್ಲಿ ನಡೆದ ೧೯೯ಳ ಮೈಲಿ ದೂರದ ಬೈಸಿಕಲ್ ಓಟದ ಸ್ಪರ್ಧೆಯಲ್ಲಿ ವಿಶೇಷ ತರಬೇತಿ ಪಡೆದಿದ್ದ ೫೦ ಬಲಿಷ್ಠ ಯುವಕರು ಭಾಗವಹಿಸಿದ್ದಾಗ, ಗೆದ್ದವನು ೬೦ ವರ್ಷ ವಯಸ್ಸಿನ ವೃದ್ಧ; ಎರಡನೆಯವನಿಗಿಂತ ೨೯ ಗಂಟೆ ಮುಂಚೆ ಅವನು ಕೊನೆಯನ್ನು ತಲಪಿದ್ದ. ಜೋಸೆಫ್ ಡಾರ್ಜಿ ಎಂಬುವನು ಬುಟ್ಟಿಯೊಳಗಿದ್ದ ಮೊಟ್ಟೆಗಳು ಒಂದೂ ಒಡೆಯದಂತೆ ಮಿಂಚಿನ ವೇಗದಲ್ಲಿ ಬುಟ್ಟಿಯೊಳಗೆ ಹಾರಿ ಅಲ್ಲಿಂದ ಹೊರಗೆ ಜಿಗಿಯುತ್ತಿದ್ದ, ಗ್ರೀಸ್ ದೇಶದ ಜಾರ್ಗ್‌ಕಾಕಿಸ್ ಒಂದು ಬಾಂಬ್ ಸ್ಫೋಟದ ಅಪಘಾತದಿಂದ, ಬಲಗೈ ಸುಟ್ಟುಹೋಯಿತು, ಎಡಗೈಯಲ್ಲಿ-ಸ್ಪರ್ಶ ಸಂವೇದನೆ ನಾಶವಾಯಿತು; ಆದರೂ ಅವನು ತನ್ನ ಬ್ರೇಲಿ ಅಕ್ಷರಗಳನ್ನು ಓದಲು ಕಲಿತು ವಿದ್ವಾಂಸನಾದ. ಚಿಕ್ಕಂದಿನಿಂದಲೂ ಸಂಪೂರ್ಣ ಕುರುಡ, ಕಿವುಡನಾಗಿದ್ದ ಜೊಸೆಫ್ ಸ್ಮಿತ್ ದಾಸ್ ಸಾಹಸದಿಂದ ಅಮೇರಿಕದ ಒಂದು ವಿಶ್ವವಿದ್ಯಾನಿಲಯದ ಪದವೀಧರನಾಗಿ ಅತ್ಯುನ್ನತ ಗೌರವದ ಪ್ರಶಸ್ತಿಗಳನ್ನು ಗಳಿಸಲು ಮಾಡಿದ ಸಾಹಸಗಳು ಅದ್ಭುತವಾದವು.

ನಯಾಗರಾ ಜಲಪಾತದಲ್ಲಿ ೧೫೦೦ ಅಡಿ ಅಗಲ ೨೦೦ ಆಳದ ಭಿಕರ ಪ್ರಕಾಶದ ಮೇಲೆ ಬ್ಲಾಂಡಿನ್ ಎಂಬ ಫ್ರೆಂಚರವನು ಒಂದು ದಂಡೆಯಿಂದ ಇನ್ನೊಂದು ದಂಡೆಗೆ ೧೦೦೦ ಅಡಿ ಉದ್ದದ ಹಗ್ಗವನ್ನು ಬಿಗಿದು ಕಟ್ಟಿ ಅದರ ಮೇಲೆ ರೋಮಾಂಚಕಸರತ್ತುಗಳನ್ನು ಮಾಡಿದ. ಜೋಕಾಲಿಯಂತೆ ಓಲಾಡುವ ಹಗ್ಗದಮೇಲೆ ನಡೆದ; ಓಡಿದ; ಒಂದು ಕಾಲನ್ನು ಇಳಿಬಿಟ್ಟು ಹಗ್ಗದ ಮೇಲೆ ಕುಳಿತು ಕೆಳಕ್ಕೆ ಬಾಗಿ ನೋಡಿದ; ಅಂಗಾತ ಮಲಗಿದ; ಹಿಂದ, ಮುಂದಾಗಿ ಲಾಗಗಳನ್ನು ಹೊಡೆದು ನಿಂತ; ಎದುರುಕಡೆ ನೋಡುತ್ತಾ ಹಿಂದೆ ಹಿಂದೆ ನಡೆದ ಭಾರವಾದ ಕುರ್ಚಿಯನ್ನೆತ್ತಿಕೊಂಡು ಹಗ್ಗದ ಮೇಲೆ ನಡೆದ. ಕುರ್ಚಿಯ ಎರಡು ಕಾಲುಗಳನ್ನು ಹಗ್ಗದ ಮೇಲಿಟ್ಟು, ಕುರ್ಚಿಯಮೇಲೆ ಕುಳಿತು ಸುತ್ತಲೂ ನೋಡಿದ; ಕುರ್ಚಿಯ ಮೇಲೆ ತಲೆಯಿಟ್ಟು ಕಾಲು ಮೇಲಾಗಿ ನಿಂತುಕೊಂಡ. ಕಾಲಿಗೆ ಮೈಗೆ ಕಂಬಳಿ ಸುತ್ತಿಕೊಂಡು ಕೈಗಳನ್ನು ಹಿಂದಕ್ಕೆ ಬಿಗಿಸಿಕೊಂಡು, ಕಣ್ಣು ಕಟ್ಟಿಸಿಕೊಂಡು ನಯಾಗರವನ್ನು ದಾಟಿದ. ಕುರ್ಚಿ, ಮೇಜನ್ನು ಹಗ್ಗದ ಮೇಲೆಒಯ್ದು, ಅಡಿಗೆ ಮಾಡಿ ಕೂತು ಊಟ ಮಾಡಿದ. ಹೆಗಲ ಮೇಲೆ ಒಬ್ಬನನ್ನು ಹೊತ್ತುಕೊಂಡು, ಇಳಿಸಿ, ಪುನಃ ಹೊತ್ತುಕೊಂಡು ನಡೆದ. ಮರಗಾಲುಗಳನ್ನು ಕಟ್ಟಿಕೊಂಡು ನಡೆದ. ನಯಾಗಾರದ ಮಧ್ಯ ಭಾಗಕ್ಕೆಹೋಗಿ ಅರ್ಧ ಗಂಟೆ ನರ್ತಿಸಿದ. ಹಗ್ಗದ ಮೇಲೆ ನಿಂತು ತನ್ನ ಹ್ಯಾಟನ್ನು ಚಾಚಿ, ಕೆಳಗೆ ನದಿಯಲ್ಲಿದ್ದವನೊಬ್ಬನಿಂದ ಹ್ಯಾಟಿಗೆ ಗುಂಡು ಹೊಡೆಯಿಸಿ, ತೂತಾದ ಹ್ಯಾಟನ್ನು ಅಲ್ಲಾಡಿಸುತ್ತಾ ನಡೆದ. ಇನ್ನೊಂದು ಸ್ಥಳದಲ್ಲಿ ಹಗ್ಗದಮೇಲೆ ಒಂದು ಸಿಂಹದ ಮರಿಯನ್ನು ನಡೆಸಿಕೊಂಡು ಹೋದ.

# “ಕೃಷಿ ವಸ್ತು ಬೆಲೆಗಳಿಗೊಂದು ಶಾಶ್ವತ ಪರಿಹಾರ”

—ಡಾ. ಎಸ್. ಪಿ. ಪಾಟೀಲ್

ಇತ್ತೀಚೆಗೆ ಜೋಳ, ಭತ್ತ, ಹತ್ತಿ, ಶೆಂಗಾ, ತಂಬಾಕು, ಕಬ್ಬು, ಬೆಲ್ಲ ಮುಂತಾದ ಮುಖ್ಯ ಕೃಷಿ ವಸ್ತುಗಳ ಬೆಲೆಗಳು ಇಳಿಯುತ್ತಿವೆ. ತದ್ವಿರುದ್ಧ ಆಧುನಿಕ ಬೇಸಾಯಕ್ಕೆ ಅವಶ್ಯ ವಿರುವ ಬೀಜ, ಗೊಬ್ಬರ, ಕ್ರಿಮಿನಾಶಕ ಹಾಗೂ ವಿದ್ಯುತ್ ಶಕ್ತಿ, ಸಿಮೆಂಟ್, ಕಬ್ಬಿಣ, ಮುಂತಾದವುಗಳ ಬೆಲೆಗಳು ಏರುತ್ತಲೇ ಇವೆ. ಇದಲ್ಲದೆ ಗ್ರಾಹಕರ ವಸ್ತುಗಳ ಅಂಕಿ ಸೂಚಿಗಳೂ ಕೂಡ ಏರುವ ಪ್ರವೃತ್ತಿ ತೋರಿಸುತ್ತಿವೆ- ಇದರಿಂದ
1) ಪ್ರಗತಿಪರ ಬೇಸಾಯ ಮಾಡುವ ರೈತರಿಗೆ ಲಾಭಾಂಶ ಕಡಿಮೆಯಾಗುವ ಇಲ್ಲವೇ ಲಾಭವೇ ಇಲ್ಲವೆಂದಾಗುವ ಸಂಭಾವವಿದೆ. 2) ರೈತರು ತಮ್ಮ ಜೀವನಕ್ಕೆ ಅವಶ್ಯವಿರುವ ಬಟ್ಟೆಬರೆಗಳನ್ನು ಹೆಚ್ಚು ಬೆಲೆತೆತ್ತು ಕೊಳ್ಳಬೇಕಾಗುತ್ತದೆ. ಇದರ ಇಂಗಿತ ಇಷ್ಟೇ. ರೈತರು ತಮ್ಮ ಬೇಸಾಯಕ್ಕೆ ಮತ್ತು ಜೀವನಕ್ಕೆ ಅವಶ ವಿರುವ ವಸ್ತುಗಳನ್ನು ಹೆಚ್ಚು ಬೆಲೆ ತೆತ್ತು ತಾವು ಬೆಳೆದ ವಸ್ತುಗಳನ್ನು ಕಮ್ಮಿ ಬೆಲೆಗೆ ಮಾರಾಟ ಮಾಡುವರು. ಇಂಥ ಪ್ರಸಂಗದಲ್ಲಿ ಜೀವನವನ್ನು ಸುಗಮವಾಗಿ ಸಾಗಿಸುವುದೇ ಕಷ್ಟವಾಗಿದೆ. ರೈತರು ಸಂಕಷ್ಟಕ್ಕೊಳಗಾಗಿದ್ದಾರೆ ಇದರಿಂದಾಗಿ ರೈತರು ವೈಜ್ಞಾನಿಕ (Scientific) ಬೇಸಾಯಕ್ಕೆ ಶರಣು ಹೊಡೆದು ಪುನಃ ಸಾಂಪ್ರದಾಯಕ (Tradional) ಮತ್ತು ಜೀವನೋಪಾಯ (Subsistence) ಬೇಸಾಯಕ್ಕೆ ಮರಳುವ ಸಂಭವವಿದೆ. ಇದು ರಾಷ್ಟ್ರದ ದೃಷ್ಟಿಯಿಂದ ಅಪಾಯಕಾರಿ. ಈ ಪರಿಸ್ಥಿತಿಯನ್ನು ಕೃಷಿ ಅಭಿವೃದ್ಧಿಗೆ ಸಂಬಂಧ ಪಟ್ಟವರು ಗಮನದಲ್ಲಿಟ್ಟುಕೊಂಡು ಹೀಗಾಗದಂತೆ ಕಾರ್ಯ ಮಾಡುವುದು ಅವಶ್ಯ. ಇಂದಿನ ಪರಿಸ್ಥಿತಿಯನ್ನು ಎದುರಿಸಲು ಸೂಕ್ತ ಕ್ರಮಗಳ ಬಗ್ಗೆ ಈ ಲೇಖದಲ್ಲಿ ವಿವೇಚಿಸಲಾಗಿದೆ.

**ರಾಷ್ಟ್ರದ ಕರೆಗೆ ಓಗೊಟ್ಟ ರೈತ :**

“ರೈತನು ಒಕ್ಕಿದರೆ ಜಗವೆಲ್ಲಾ ಬದಕುವುದು ಇಲ್ಲವಾದರೆ ಜಗವೆಲ್ಲ ಬಿಕ್ಕುವುದು “ ಎಂದು ಸರ್ವಜ್ಞ ಕವಿಯು ಹೇಳಿದಂತೆ ರಾಷ್ಟ್ರದ ಕರೆಗೆ ಓಗೊಟ್ಟು ರೈತ ವೈಜ್ಞಾನಿಕ ಬೇಸಾಯ ಕೈಗೊಂಡು ದೇಶದಲ್ಲಿ ತಲೆದೋರಿದ ಆಹಾರ ಮತ್ತು ಇತರ ಅವಶ್ಯ ವಸ್ತುಗಳ ಅಭಾವವನ್ನು ತುಂಬಿಕೊಡಲು ನೆರವಾಗಿದ್ದಾನೆ . ದೇಶವು ಈ ದಿಶೆಯಲ್ಲಿ ಸ್ವಾಯತ್ತತೆಯನ್ನು ಪಡೆದಿದೆ . ಅಲ್ಲದೆ ಗೋಧಿ ಅಕ್ಕಿ, ಸಕ್ಕರೆ, ಹತ್ತಿಗಳನ್ನು ವಿದೇಶಿಗಳಿಗೆ ಕೂಡಾ ನಿರ್ಯಾತ ಮಾಡಲು ಸನ್ನದ್ಧ ವಾಗಿದೆ . ಕರ್ನಾಟಕ ರಾಜ್ಯವು ರಾಜ್ಯಕ್ಕೆ ಅವಶ್ಯವಿದ್ದ ಆಹಾರವನ್ನು ಬೆಳೆದು ನೆರೆ ರಾಜ್ಯಗಳಿಗೆ ಕೂಡಾ ಜೋಳ , ಅಕ್ಕಿಗಳನ್ನು ಪೂರೈಸುತ್ತಿದೆ . ಈ ಹೆಚ್ಚುವರಿ ಬೆಳೆಗೆ ರೈತನಲ್ಲಿರುವ ರಾಷ್ಟ್ರೀಯ ದೃಷ್ಟಿ ಮತ್ತು ಆಕರ್ಷಿತ ಬೆಲೆಗಳು ಇಂದು ಕುಸಿದು ರೈತನಲ್ಲಿ ನಿರುತ್ಸಾಹವನ್ನುಂಟು ಮಾಡಿದೆ. ಜಗವೆಲ್ಲಾ ಬದುಕಿಸಿದ ರೈತನು ಬಿಕ್ಕುವ ಪ್ರಸಂಗ ಬಂದೊದಗಿದೆ. ಈ ಕೊರತೆಯನ್ನು ತೀವ್ರ ಸರಿಪಡಿಸಿಕೊಳ್ಳುವುದು ಅವಶ್ಯ.

**ಪರಿಸ್ಥಿತಿಯ ಸಮೀಕ್ಷೆ ಬೆಳೆಗಳ ಮುಂಘೋಷಣೆ:**

ರಾಷ್ಟ್ರದ ಕೃಷಿ ಅಭಿವೃದ್ಧಿ ದೃಷ್ಟಿಯಿಂದ ಇಂದು ರೈತರು ಅನುಭವಿಸುತ್ತಿರುವ ಸಂಕಷ್ಟಗಳನ್ನು ನಿವಾರಿಸುವುದು ಅವಶ್ಯ. ಇದಕ್ಕೆ ಪ್ರಥಮ ಹೆಜ್ಜೆ ಎಂದರೆ, ಇಲ್ಲಿಯುವರೆಗೆ ಆಗಿರುವ ಉತ್ಪಾದನೆಯ ಪ್ರಗತಿಯನ್ನು ಕೂಲಂಕಷವಾಗಿ ಸಮೀಕ್ಷೆ ಮಾಡಿ ಮುಂದೆ ಪ್ರೋತ್ಸಾಹಿಸಬೇಕಾದ ಬೆಳೆಗಳ ಕಾರ್ಯಕ್ರಮಗಳನ್ನು ಸಿದ್ಧಪಡಿಸುವುದು, ಆಹಾರ ಧಾನ್ಯಗಳ ಬೆಳೆಯ ಬಗ್ಗೆ ಹೇಳಬೇಕಾದರೆ, ಕರ್ನಾಟಕದಲ್ಲಿ ಕಳೆದ ವರ್ಷ ಅಂದರೆ 1977–78 ನೇ ಸಾಲಿನಲ್ಲಿ ಸುಮಾರು 70 ಲಕ್ಷ ಟನ್ ಆಹಾರ ಧಾನ್ಯಗಳನ್ನು ಬೆಳೆದು ಬೆಳೆಯ ವಿಕ್ರಮ ಸಾಧಿಸಲಾಗಿದೆ. ಇದು ರಾಜ್ಯದ 20 ಲಕ್ಷ ಟನ್ ಹೆಚ್ಚುವರಿಯಾಗಿದೆ. ಇದು ಇಂದು ಆಹಾರ ಧಾನ್ಯಗಳ ಬೆಲೆಗಳು ಇಳಿಮುಖವಾಗಲು ಕಾರಣವಾಗಿದೆ. ಇದಕ್ಕೆ ತಕ್ಕ ಉಪಾಯವೆಂದರೆ, ಆಹಾರ ಧಾನ್ಯಗಳ ಕ್ಷೇತ್ರವನ್ನು ಕಮ್ಮಿ ಅಧಿಕ ಇಳುವರಿ ತಳಿಗಳ ಕ್ಷೇತ್ರವನ್ನು ಹೆಚ್ಚಿಸಿ, ರಾಜ್ಯದಲ್ಲಿ ಆಹಾರ ಧಾನ್ಯಗಳ ಬೇಡಿಕೆಗೆ ಅವಶ್ಯವಾದುದನ್ನು ಬೆಳೆಯಬಹುದು. ಹೀಗೆ ಕಡಿಮೆ ಮಾಡಿದ ಕ್ಷೇತ್ರದಲ್ಲಿ ಇನ್ನೂ ಉತ್ಪಾದನೆ ಹೆಚ್ಚಿಸಬೇಕಾದ ಎಣ್ಣೆ ಕಾಳು ಮತ್ತು ಇತರ ವಾಣಿಜ್ಯ ಬೆಳೆಗಳನ್ನು ಬೆಳೆಯಬಹುದು.

**ಅಧಿಕ ಉತ್ಪಾದನೆಗೆ ಪ್ರಚಾರದೊಂದಿಗೆ ಬೆಂಬಲಿತ ಬೆಲೆಯ ಘೋಷಣೆ :**

ಇಂದು ರಾಜ್ಯದಲ್ಲಿ ಮುಖ್ಯ ಬೆಳೆಗಳ ಉತ್ಪಾದನೆಯನ್ನು ಹೆಚ್ಚಿಸುವ ಬಗ್ಗೆ ಪ್ರಚಾರ ಸತತ ನಡೆಯುತ್ತದೆ. ಇಂದು ಆಯಾ ಬೆಳೆಗಳ ಹೈಬ್ರಿಡ್ ಇಲ್ಲವೆ ಅಧಿಕ ಇಳುವರಿ ಕೊಡುವ ತಳಿಗಳು, ಅವಕ್ಕೆ ಅವಶ್ಯವಿರುವ ಬೀಜ; ಗೊಬ್ಬರ; ಕ್ರಿಮಿನಾಶಕ ಮುಂತಾಪವುಗಳ ಲಭ್ಯತೆ ಅವುಗಳ ಉಪಯೋಗದ ಬಗ್ಗೆ ಪ್ರಚಾರ ನಡೆಯುತ್ತಿದೆ. ಈ ಪ್ರಚಾರದಲ್ಲಿ ಬೆಂಬಲಿತ ಬೆಲೆಗೆ ಕೊಳ್ಳುವ ಭರವಸೆಯನ್ನು ಕೊಡುವುದು ಅವಶ್ಯ. ಇಂದಿನ ಪ್ರಚಾರದಲ್ಲಿರುವುದು ಇದೊಂದು ಕೊರತೆ. ಬೆಂಬಲ ಬೆಲೆ ಇಲ್ಲದಕ್ಕೇನೆ ರೈತರು ಕಳವಳಗೊಂಡಿದ್ದಾರೆ.

**ಕೃಷಿ ವಸ್ತುಗಳ ಆಕರ್ಷಕ ಬೆಲೆಗಳು ಅವಶ್ಯ :**

ಇಂದು ಆಹಾರ ಧಾನ್ಯಗಳಾದ ಭತ್ತ, ಜೋಳ, ರಾಗಿ, ಮುಸುಕಿನ ಜೋಳಗಳಿಗೆ ಎತ್ತುವಳಿ ಬೆಲೆಗಳಿವೆ. ನಿಜವಾಗಿಯೂ ಎತ್ತುವಳಿ ಬೆಲೆಗಳು ಆಕರ್ಷಕ ಬೆಲೆಗಳಲ್ಲ ಸಾಮಾನ್ಯವಾಗಿ ಇದು ಉತ್ಪಾದನಾ ವೆಚ್ಚಕ್ಕಿಂತ ಕಡಿಮೆ ಬೆಲೆಯೆಂದೇ ಹೇಳಬಹುದು. ರೈತರು ಉದಾರ ಮನಸ್ಸಿನಿಂದ ಪಟ್ಟಣದ ನಿವಾಸಿಳ ಉಪಯೋಗಕ್ಕಾಗಿ ತಾವು ಬೆಳೆದ ಒಂದು ಅಂಶವನ್ನು ಲೇವಿ ಕೊಡುವುದುಂಟು. ಬೇರೆ ಬೇರೆ ಜಾತಿಯ ಹತ್ತಿಗೆ ಬೆಂಬಲ ಬೆಲೆ ಘೋಷಿಸಿದ್ದರೂ ಅದರ ಖರೀದಿ ತೃಪ್ತಿಕರವಾಗಿಲ್ಲ. ಕರ್ನಾಟಕದಲ್ಲಿ ತಂಬಾಕ ಬೆಳೆಗಳು ಮತ್ತು ಎಣ್ಣೆಕಾಳುಗಳಿಗೆ ಯಾವುದೇ ತರಹದ/ಬೆಲೆಯ ಆಶ್ವಾಸನವಿಲ್ಲ. ಅಧಿಕ ಉತ್ಪಾದನೆಗೆ ಪ್ರೋತ್ಸಾಹಿಸಲು ಆಕರ್ಷಕ ಬೆಲೆಗಳ ಬಗ್ಗೆ ನಿರ್ಣಯಿಸವುದು ಅವಶ್ಯ.

**ಆಧಾರಿತ ಬೆಲಿಯ ದೀರ್ಘಾವಧಿ ಕಾಲಾವಧಿ ಘೋಷಣೆ:**

ಆಯಾ ಬೆಳೆಗಳನ್ನು ಉತ್ಪಾದಿಸಲು ತಗಲುವ ವೆಚ್ಚದ ಆಧಾರದ ಮೇಲೆ ಯೋಗ್ಯ ಬೆಲೆಗಳನ್ನು ನಿರ್ಧರಿಸಿ ಆ ಬೆಲೆಗಳನ್ನು ಕನಿಷ್ಠ 5ವರ್ಷಗಳ ಮಟ್ಟಿಗಾದರೂ ಘೋಷಿಸುವುದು ಅವಶ್ಯ . ಇಂಥ ಘೋಷಣೆಯನ್ನು ಆಯಾ ಬೆಳೆಯ ಬಿತ್ತನೆ ಪೂರ್ವದಲ್ಲಿ ಮಾಡಬೇಕು . ಈ ವಿಷಯವನ್ನು ಎಲ್ಲಾರೂ ಒಪ್ಪಿದರೂ ಕಾರ್ಯಾಚರಣೆಯಲ್ಲಿ ಮಾತ್ರ ಇಲ್ಲ .

**ಸಂಗ್ರಹಕ್ಕಾಗಿ ಸಮರ್ಪಕ ಉಗ್ರಾಣ :**

ಯೋಗ್ಯ ಸಂಗ್ರಹ ವ್ಯವಸ್ಥಾ ಇಲ್ಲದಿರುವುದೇ ಇಂದಿನ ಪರಿಸ್ಥಿತಿಗೆ ರೈತನಲ್ಲಿ ಸಂಗ್ರಹಶಕ್ತಿ ಇಲ್ಲದ್ದಕ್ಕೆ ಬೆಳೆಯನ್ನು ಲಕ್ಕಿದ ತಕ್ಷಣ;ಪೇಟೆಗೆ ಕಳಿಸುತ್ತಾರೆ ಪೇಟೆಗೆ ಒಮ್ಮೆಲೆ ಬರತೊಡಗಿದೊಡನೆಯೇ ಬೆಲೆಗಳು ಕುಸಿಯುತ್ತವೆ . ರೈತರು ತಮ್ಮ ಮಾಲನ್ನು ಇಡಲು ಸಮರ್ಪಕ ಉಗ್ರಾಣ ಮತ್ತು ಸಂಗ್ರಹಾಲಯಗಳ ವ್ಯವಸ್ಥೆ ಅವಶ್ಯ. ರಾಜ್ಯದಲ್ಲಿ ಕೇಂದ್ರ ಹಾಗೂ ರಾಜ್ಯ ಸರಕಾರಗಳ ಉಗ್ರಾಣಗಳ ಉಪಯೋಗ ಸಮರ್ಪಕವಾಗಿಲ್ಲ. ರೈತರಿಗೆ ಇದರ ಲಾಭ ತಟ್ಟಿಲ್ಲ . ಇದಲ್ಲದೆ ಯೋಗ್ಯ ಬೆಲೆ ಬರುವರೆಗೆ ಸಂಗ್ರಹಿಸಿ ಇಡಲು ಹಣದ ವ್ಯವಸ್ಥೆ ಬೇಕು . ಈ ದಿಶೆಯಲ್ಲಿ ವಿಶೇಷಲಕ್ಷ್ಯ ಪೂರೈಸುವುದು ಅವಶ್ಯ ಈ ಕಾರ್ಯಗಳಿಗೆ ಆದ್ಯತೆ ಕೊಡಬೇಕು .

**ಸಾಮೂಹಿಕ ಮಾಧ್ಯಮಗಳಿಂದ ಪ್ರಚಾರ :**

ಸಾಮೂಹಿಕ ಮಾಧ್ಯಮಗಳಾದ ರೇಡಿಯೋ ಮತ್ತು ವೃತ್ತ ಪತ್ರಿಕೆಗಳು ಕೃಷಿ ಅಧಿಕ ಉತ್ಪಾದನೆ ಕಾರ್ಯದಲ್ಲಿ ಒಳ್ಳೆ ಕೆಲಸ ಮಾಡಿವೆ . ಇಂದು ನಾವು ಹೆಮ್ಮೆ ಪಡುವ ಆಹಾರ ಧಾನ್ಯಗಳ ಉತ್ಪಾದನೆಯಲ್ಲಿ ಸ್ವಾವಲಂಬನೆ ಪಡೆಯುಬಲ್ಲ ಮಹತ್ತರ ಪಾತ್ರ ವಹಿಸಿವೆ . ಆದರೆ ಇನ್ನೂ ಅವುಗಳ ಉತ್ಪಾದನಾ ಹೆಚ್ಚಳದ ಬಗ್ಗೆಯೇ ಪ್ರಚಾರ ಮಾಡುತ್ತಿವೆ ಆದರೆ ಇಂದಿನ ಬದಲಾದ ಪರಿಸ್ಥಿತಿಯಲ್ಲಿ ಬೆಳೆಗಳನ್ನು ಬೆಳೆಯಲು ತಗಲುವ ವೆಚ್ಚ ಬೆಲೆಗಳ ಇಳಿಮುಖಕ್ಕೆ ಕಾರಣ, ಸಂಗ್ರದ ವ್ಯವಸ್ಥೆ, ಲೇವಿ ಇಲ್ಲವೆ ಆಧಾರಿತ ಬೆಲೆಗೆ ಕೃಷಿ ವಸ್ತುಗಳ ಕೊಳ್ಳುವ

(26 ನೇ ಪುಟ ನೋಡಿ)

# ದೇಶ ಮತ್ತು ಈಶ

—ಬಿ. ಎಚ್. ಶ್ರೀಧರ

> "ದೇಶ ಸೇವೆಯೇ ಈಶ ಸೇವೆ" ಎಂಬ ನಾಣ್ಣುಡಿಯುಂಟು. ಕಾರಣ ದೇಶ ಈಶ ವ್ಯಾಪ್ತ, ಇದು ಶಾಸ್ತ್ರಸಿದ್ಧವೂ ಹೌದು. ಇದನ್ನು ಮಾನ್ಯ ಲೇಖಕರು ವೇದಾಂತ ತತ್ವದ ಹಿನ್ನಲೆಯಲ್ಲಿ ವಿವರಿಸಿ, ರಾಮಕೃಷ್ಣ ಅರವಿಂದರಂತೆ, ಪ್ರತಿಯೊಬ್ಬರೂ ಅವನ್ನು ಮೈಗೂಡಿಸಿಕೊಳ್ಳ ಬೇಕೆನ್ನುತ್ತಾರೆ.
> —ಸಂ

ಕೆಲವರಿಗೆ "ಈಶ ಸೇವೆ" ಎಂದರೆ ದೇಶದ ಜನರ ಸೇವೆ ಎಂದರೇನೇ ತೃಪ್ತಿ; ಅದು "ಈಶ ಸೇವೆ" ಎಂದರೆ ತೃಪ್ತಿಯಾಗದು. ದೇಶ–ಈಶರಲ್ಲಿ ಭೇದವಿದೆ ಎಂಬವರಿಗೀವಾದ ಅಪರಿಹಾರ್ಯ–ಅದರಲ್ಲೂ ಆತ್ಯಂತಿಕ ಭೇದವಿದೆ ಎಂಬವರಿಗೆದೇಶ ಸೇವೆ ಈಶ ಸೇವೆಯಾಗದು, ಈಶನಿಗೆ ಸಲ್ಲಿಸುವ ಸೇವೆ ಈಶನಿಗೇ–ದೇಶಕ್ಕಲ್ಲ. ಹಾಗಾದಾಗ ದೇಶಸೇವೆಯ ಸ್ಥಾನ ಗೌಣವಾಗುತ್ತದೆ. ತದ್ವಿರುದ್ಧವಾಗಿ, ದೇಶವು ಈಶವ್ಯಾಪ್ತ, ದೇಶದ ಚರಾಚರಾಗಳೆಲ್ಲವೂ ಈಶನ ಮಕ್ಕಳು ಆದುದರಿಂದ ಅವರ ಸೇವೆ ಅವನ ಸೇವೆ ಎಂದು ಅರ್ಥಮಾಡುವವರ ದೇಶಸೇವೆ ಐಚ್ಛಿಕ (optional) ಎನ್ನಿಸುತ್ತದೆ. ಅದೇ ಪ್ರಕಾರ, ಕೇವಲಾದ್ವೈತದ ಜೀವನ್ಮುಕ್ತನಿಗೂ ಜಗತ್ಸೇವೆಯು ಐಚ್ಛಿಕ. ಆದರೆ ಈತ ಈಶನೇ ಆಗಿರುವುದರಿಂದ ಈಶ ಸಂಕಲ್ಪಾನುಸಾರವಾಗಿ ತನ್ನ ಈಶೇತರ (ಶುದ್ಧ ಬ್ರಹ್ಮೇತರ) ಶಕ್ತಿಯನ್ನು ದೇಶ ಕಾಲಾವಚ್ಛಿನ್ನವಾಗಿ ನಿವೃತ್ತಿ ಧರ್ಮ ಎಂದು ಲೋಕಕಲ್ಯಾಣಕ್ಕಾಗಿ ವ್ಯಕ್ತಾವ್ಯಕ್ತವಾಗಿಬಳಸಿಯೇ ಬಳಸುತ್ತಾನೆ! ಇಂದ್ರಿಯ ಗೋಚರವಾಗಿ ಅವನು ಲೋಕೋಪಕಾರವನ್ನು ಸಾಮಾನ್ಯನಿಗೆ ತಿಳಿಯುವ ಮತ್ತು ಅವನು ಬಯಸುವ ರೀತಿಗಳಿಂದ ಮಾಡದಿದ್ದರೂ ಅದು ಸ್ವೋಪಕಾರವೆಂದೇ ತಿಳಿದು ಗುಪ್ತವಾಗಿ (ಪ್ರಕಟವಾಗಿ ಮಾಡುವುದಕ್ಕಿಂತ ಹೆಚ್ಚಾಗಿ) ಮಾಡುತ್ತಲೇ ಇರುತ್ತಾನೆ. ("ತಸ್ಯಕರ್ತಾರಮಪಿಮಾಂ ವಿದ್ಯಕರ್ತಾರ ಮವ್ಯಯಂ" ಗೀತೆ). ಅವನದು ಪೂರ್ಣ ನಿರಂಹಂಕಾರದ "ಕರ್ತೃತ್ವ" ಆ ಕರ್ತೃತ್ವ ಐಕ್ಯಪ್ರಜ್ಞಾಜನ್ಯ; ಅದು ಪೂರ್ಣ ಅಜಯ್ಯ ಅಕ್ಷಯ್ಯ ಅವನು ಮಾಡುವುದು ಸ್ವಬಂಧ ಮೋಕ್ಷವನ್ನು. ನಿತ್ಯಮುಕ್ತನ ಬಂಧನವು ಆಭಾಸಿಕ ಲೀಲಾ ಮಾತ್ರ; ಅದರ ಮೋಚನವೂ ಹಾಗೇ ಇಂದ್ರಿಯ. ಅವನ ನಾನಾತ್ವಾಭಿವ್ಯಕ್ತಿಯೂ, ಅಧ್ಯಾಸ, ಆಭಾಸ. ಆದರೆ ಹಾಗೇ ನಾನಾತ್ವವಾಗಿ ರೂಪಗೊಂಡ ತದಿತರರಾದ ನಮಗೆ "ನಾವು ನಾವು–ಅವನು ಅವನು." ತಾದಾತ್ಮ್ಯ ಅಥವಾ ಆತ್ಯಂತಿಕ ತಲ್ಲೀನತೆಯೇ ಸಾಮಾನ್ಯನ ಆದರ್ಶ (ಅದ್ವೈತ)ಸಾಯುಜ್ಯ ಮುಕ್ತಿ; ಶ್ರೀ ಅರವಿಂದ ಪರಿಭಾಷೆಯಲ್ಲಿ ಜೀವನ್ಮುಕ್ತನು Superman ಅತಿಮಾನಸ(ಅತಿಮಾನವ, ಅವತಾರಿ, ದಿವ್ಯಮಾತೆ, ದೇವ, ಗುರು) ಶಕ್ತಿ ಅಧಃಪತಿತರನ್ನು ಆಧ್ಯಾತ್ಮಿಕ ಪ್ರಶಿಕ್ಷಣದ ಮೂಲಕ ಸಾತ್ಮ್ಯಿಮಾಡಿಕೊಳ್ಳುತ್ತಾನೆ. (ಬದ್ಧನ ದೃಷ್ಟಿಯಿಂದ) ಮುಕ್ತನಿಗೆ (ಸ್ಥಿತಪ್ರಜ್ಞಸ್ಯ ಕಾಭಾಷಾ–ಗೀತಾ) ಪರಾ–ಪಶ್ಯಂತೀ–ಮಧ್ಯಮಗಳಲ್ಲದೆ ವೈಖರಿಯ ಮಾನುಷ ಭಾಷೆ ಇಲ್ಲ –ಅಂದರೆ ಅದು ಸ್ವರೂಪ ಹೇಳಲು ನಿರುಪಯುಕ್ತ.

ಅದ್ವೈತೇತರವಾದ ತತ್ವಜ್ಞಾನ ಪದ್ಧತಿಗಳೆಲ್ಲವೂ ಕಾವ್ಯಶೈಲಿರಚಿತ ಎಂದು ಶ್ರೀ ಕೃಷ್ಣಚೈತನ್ಯನೆಂಬ ವಿದ್ವಾಂಸನ ಅಭಿಪ್ರಾಯದಿಂದ ಅನುಮೇಯ. ಅದ್ವೈತವು ಕಾವ್ಯಾನುಮಾನ (ಧ್ವನಿ) ಮಾರ್ಗವನ್ನು ಅನಿವಾರ್ಯವಾಗಿ ಬಳಸಿದ್ದಕ್ಕೆ ಹೇರಳ ಉದಾಹರಣೆಗಳಿವೆ, ಆದುದ್ದರಿಂದ ವಾದಗಳಿಗೆ ಹೇರಳಆಸ್ಪದ ಉಂಟಾಯ್ತು. ಈವಾದಗಳು ಅನೈತ್ಯಕ್ಕೆ ಹಾದಿಗಳು. ಯೋಗದ ಅಸಂಪ್ರಜ್ಞಾತ ಸಮಾಧಿಯನ್ನು ಪಡೆದವನದು ಮೌನವ್ಯಾಖ್ಯಾನ–"ಬಲ್ಲವನೆ ಬಲ್ಲ ಬೆಲ್ಲದ ಸವಿಯ" ಎಂದು ಹಾಗೆ; ಉದಾ: "ಇಕ್ಷುಕ್ಷೀರ ಗುಡಾದಿನಾಂ ಮಾಧುರ್ಯಸ್ಯಾಂತರಂ ಮಹತ್ । ತಥಾಪಿ ನತದಖ್ಯಾತುಂ ಸರಸ್ವತ್ಯಾಪಿ ಶಕ್ಯತೇ'' (ಕಾವ್ಯದರ್ಪ). ಆದುದರಿಂದ ಶಕ್ತಿ ವಿಶಿಷ್ಟವಾದ ಅದ್ವೈತದಲ್ಲಿ "ಶಕ್ತಿ ಶಕ್ತಿ ಮತೋರಭೇದಃ" ಎಂಬ ನ್ಯಾಯವನ್ನು ಅನ್ವಯಿಸಿದರೆ ಅದು ಅಲ್ಲಮನ ಕೇವಲಾದ್ವೈತವಾಗುತ್ತದೆ–ಎಂದು ಒಬ್ಬ ವಿದ್ವಾಂಸರೆಂದುದು ಸ್ಮರಣೀಯ.



ಇಂಥ ಈಶಸೇವೆ ಆತ್ಮಸೇವೆ. ಅದೇ ದೇಶಸೇವೆ, ಲೋಕೋಪಕಾರ, ಲೋಕ ಸಂಗ್ರಹ. "ಆತ್ಮಾಚ ಬ್ರಹ್ಮ"; ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್ । ತೇನತ್ಯಕ್ತೇನ ಭುಂಜೀಥಾಃ ಮಾಗೃಧಃ ಕಸ್ಯಸ್ವಿದ್ಧನಂ" ಎಂಬ ಉಪನಿಷದುಕ್ತಿಗಳು ಜೀವನ ಧರ್ಮಯೋಗದ ವಾಚಕಗಳು.

ಬ್ರಹ್ಮಾರ್ಪಣಂ ಬ್ರಹ್ಮ ಹವಿರ್
ಬ್ರಹ್ಮಾಗ್ನೌ ಬ್ರಹ್ಮಣಾ ಹುತಂ ।
ಬ್ರಹ್ಮೈವತೇನ ಗಂತವ್ಯಂ
ಬ್ರಹ್ಮಕರ್ಮ ಸಮಾಧಿನಾ ॥''

ಎಂಬುದು ಅದರ ಸಾರ. ಕರ್ತೃಹಂಕಾರ ರಹಿತನಾಗಿ, ಈಶಾರ್ಪಣ ಬುದ್ಧಿಯಿಂದ, ಮುಕ್ತತ್ವದ ಗುರಿಯಿಂದ, ಸಜ್ಜನೋಪಕಾರಕ್ಕಾಗಿ ತನ್ನ ಮನೋವಾಕ್ಕಾಯ ಕರ್ಮಗಳನ್ನು ಮೀಸಲಿಡುವುದು ಸಾಧಕನ (ಸಿದ್ಧನದೆಂದು ಯಾವಾಗಲೂ ಹೇಳಲು ಬರಲಾರದು) ಜ್ಞಾನ–ಭಕ್ತಿ ಕರ್ಮ ಸಮುಚ್ಚಯವಾದ. ಇದೇ Integral Yoga ಸಮಗ್ರಯೋಗ Integral Advaita ಸಮಗ್ರಾದ್ವೈತ. ಇದೇ ಸಾಧಕನ ನಿಷ್ಕಾಮ ಕರ್ಮ, ಸಿದ್ಧನ ನಿವೃತ್ತಿ ಧರ್ಮ. "ತಸ್ಯ ಕರ್ತಾರಮಪಿಮಾಂ ವಿದ್ಧ ಕರ್ತಾರಮವ್ಯಯಂ" (ಗೀತೆ)–ಎಂಬುದು ಆದರ್ಶ ಭಾರತೀಯ ನಾಯಕತ್ವದ ಲಕ್ಷಣ.

ಅನ್ಯಾಯವು ಸತ್ಯ ಅಹಿಂಸೆ ಶೋಷಣೆ, ವಂಚನೆ– ಅನಪರಾಧಿಗಳಿಗೆ ಮಾಡುವ ದಂಡನೆ ಆತ್ಮದ ವಿಶ್ವವ್ಯಾಪಕತ್ವದ ಅರಿವು ಯಾರಿಂದಲೂ ಅನ್ಯಾಯವನ್ನು ಮಾಡಿಸದು. ಅದೊಂದೇ ಭಾರತೀಯ ಅಥವಾ ಜಗತ್ತಿನ ಐಕ್ಯ, ಶಾಂತಿ, ಸಹಾಭಿವೃದ್ಧಿಗಳಿಗೆ ಕಾರಣ. ಆದುದರಿಂದ ವಿದ್ಯೆಯ ವಿಭಾಗಗಳೆಲ್ಲವೂ ಸತ್ಯಾಹಿಂಸೆಗಳೆಂಬ ಎರಡು ಮುಖಗಳ ಒಂದು ನಾಣ್ಯದ ಆದರ್ಶವನ್ನೂ ಅದರ ಸಾಧನೆಗೆ ಸರ್ವ ಶಾಸ್ತ್ರಜ್ಞಾನಗಳೂ ಮೀಸಲೆಂಬುದನ್ನು ತಿರುಳನ್ನಾಗಿ ತೆಗೆದುಕೊಳ್ಳುವುದಗತ್ಯ. ವಿಚಾರವಂತರ ದೇವರು ಆದರ್ಶ ನ್ಯಾಯಾಚಾರ ಸಂಪನ್ನನು. ಸಾಕಾರನು ದೇವರು, ಈಶ್ವರ, ಸೃಷ್ಟಿ-ಸ್ಥಿತಿ-ಲಯಕರ್ತ–ಅವನು ಅವ್ಯಕ್ತ ಶಕ್ತಿ, ನಿಸರ್ಗೇಶ್ವರ. ನಿರಾಕಾರ ಸತ್ಯನು, ಸಚ್ಚಿದಾನಂದ ಸ್ವರೂಪನು. ಆಕಾರಗಳ ಸಾಮ ಶ್ರುತ್ಯ. (Harmony) ಸಂಪಾದನೆಯು ಧರ್ಮಸಾರ. ವಿಕಾರ ಎಂದೂ ಆಕಾರವಲ್ಲ; ಸೃಷ್ಟಿಯೆಂದೂ ವಿಸೃಷ್ಟಿಯಲ್ಲ. ವಿಸೃಷ್ಟಿಯು ಹಾಸ್ಯಾಸ್ಪದ. ದೈತ್ಯರು ಹಾಸ್ಯಾಸ್ಪದರ; ದಂಡನೆ ಅವರಿಗೆ ಶಿಕ್ಷಣ. ದೈತ್ಯರಿಗೆ ಉಪಕಾರ ಮಾಡುವುದೆಂದರೆ ಚತುರುಪಾಯಗಳಿಂದ ಅವರನ್ನು ಸಮಾಜ ಕಂಟಕರಾಗದಂತೆ ನೋಡಿಕೊಳ್ಳುವುದು. ದೈತ್ಯವಾರಣವು ದಿವ್ಯ ಜೀವನಕ್ಕೆ ಆಧಾರ. ದಿವ್ಯ ಜೀವನವೆಂದರೆ ರಾಮಕೃಷ್ಣರಂಥವರ ಜೀವನ. ಅವರೇ Supermen ಅತಿಮಾನಸರು (ಸುಪ್ರಮಾಣಸರು). ಗಾಂಧಿಯವರು ಅವರ ಸಾಲಿಗೆ ಸೇರಿದವರು. ಅವರ ಆಚಾರವನು ಅನುಸರಿಸದವರು ಸತ್ಯವಾದ ವಿವೇಕಿಗಳಾದ ಸಾಧಕರಲ್ಲ, ಲೋಕೋಪಕಾರಿಗಳಲ್ಲ. ಅಂಥವರು ಶ್ರೀರಮಣ ಮಹರ್ಷಿಗಳೆಂದಂತೆ ಅರೆ ನಿದ್ದೆಯಲ್ಲಿದ್ದವರಂತೆ (ಸ್ವಕರ್ತೃತ್ವಕ್ಕೆ ಕಾಸಿನ ಬೆಲೆಯನ್ನೂ ಕೊಡದೆ) ಲೋಕ ಹಿತವನ್ನು (ಲೋಕಪ್ರಿಯವನಲ್ಲ) ಸಾಧಿಸುತ್ತಾರೆ. ಅವರಿಗೆ ನಾವು ಸದಾ ವಿಧೇಯರಾಗಿ ವರ್ತಿಸುವುದರಿಂದ ಕಾಲಕ್ರಮೇಣ ಅವರ ಯೋಗ್ಯತೆ ನಮಗೂ ದೊರಕುತ್ತದೆ. ಕಾಯಭೇದವೆಂದೂ ಅವರಲ್ಲಿ ಆತ್ಮ ಭೇದವನ್ನುಂಟು ಮಾಡದು. ಅವರೂ ಭಾರತೀಯರು; ಮಿಕ್ಕವರು ಮುಕ್ಕಾಲು ಭಾರತೀಯರು, ಅರೆ ಭಾರತೀಯರು ಅಥವಾ ಅಭಾರತೀಯರು.–ತತ್ವದ ವಿಶ್ಲೇಷಣಾನುಸಾರವಾಗಿ, ಈ ಸಿದ್ಧಾಂತದ ಅರ್ಥವನ್ನು ಹೃದ್ಗತ ಮಾಡಿಕೊಳ್ಳದವರ ದೇಶ ಸೇವೆ ಆಷಾಢಭೂತಿತನದ್ದಾಗುವುದು–ಮೊದಲಿಲ್ಲದಿದ್ದರೂ ಕೊನೆಯಲ್ಲಿ! ಏಕೆಂದ ಅವರ ದೇಶಸೇವೆ ಅಪ್ರತಿಷ್ಠ. ನಿರಾಧಾರ. ವ್ಯಕ್ತಿಸ್ವಾರ್ಥ ಪರಾಯಣದ ಭೌತಿಕತೆ ಪರಮಾತ್ಮನಿಗಿಂತ ಹೆಚ್ಚು ಅವತಾರಗಳನ್ನು ತಾಳಬಲ್ಲದು. ಅದರಲ್ಲೂ ಅದನ್ನು ಮುಚ್ಚಿಕೊಂಡು ದೇಹ ಯಾತ್ರಾ ನಿರ್ವಹಣಾತಿರಿಕ್ತವಾದ ಲೋಭ-ಲ ಭಗಳದಾಸತ್ವದ ಅವತಾರ "ಅವಾಙ್ಮನಸ್ಸ ಗೋಚರ" ಎಂದರೆ ಅತಿಶಯೋಕ್ತಿಯಾಗಲಾರದು! ಪಾಪವೆಂದರೆ ಅದೇ–ಅದೊಂದೇ! ಅದರ ರೂಪಾಂತರವು ಅರ್ಥಾಂತರವನ್ನುಂಟು ಮಾಡಲಾರದು. ದೇವರೆದುರು ನಿಲ್ಲುವ ಸೈತಾನನೆಂದರೆ ಅದೇ. ದೇಶಭಕ್ತರು ದೇಶಭಕ್ಷಕರಾಗುವುದು ಅದರಿಂದಲೇ. ಜನ ಕಣ್ಣು ತೆರೆದು ನೋಡಬೇಕು. ನಿತ್ಯಾನಿತ್ಯ ವಸ್ತು ವಿವೇಕದಂತೆ ಮತದಾನಾದಿ ಸರ್ವದಾನಗಳಿಗೂ ಪಾತ್ರಾಪಾತ್ರವಿವೇಕವನ್ನು ಗಳಿಸಿಕೊಳ್ಳಬೇಕು. ಇಲ್ಲವಾದರೆ ದೇಶ–ಅದರೊಡನೆ ಸ್ವನಾಶ–ಎರಡೂ ಕ್ರಮೇಣ ನಿಶ್ಚಿತವಾಗಿ ಆಗುತ್ತವೆ;

ಉದ್ಧಾರ ಪ್ರಯತ್ನಗಳೇ ವಿನಾಶ ಪ್ರಯತ್ನಗಳಾಗಿ ಪರಿಣಮಿಸುತ್ತವೆ.

ದೂರದೃಷ್ಟಿ ಇಲ್ಲದಿರವುದೇ ದುರ್ದೃಷ್ಟಿ; ಆತ್ಯಂತಿಕ ಶಾಂತಿಗೆ ಮಹತ್ವವನ್ನು ಕೊಡದವರೇ ಅಹಿತಕಾರಿಗಳು. (ಅಪ್ರಿಯಕಾರಿಗಳೂ ಆದಾರು!). ಪ್ರಿಯ ಹಿತಗಳ (ಪ್ರೇಯಃ ಶ್ರೇಯಗಳ) ವಿವೇಕ ನಮಗೂ ಇತರರಿಗೂ ಒಂದೇ ಸಮನಾಗಿ ಅನ್ವಯಿಸುತ್ತದೆ. "ಯದದಾತ್ಮನ ಇಚ್ಛೇತ ತತ್ಪರಸ್ಯಾಪಿ ಚಿಂತಯೇತ್" ಎಂಬುದು ಧರ್ಮದ ಆತ್ಮ-ದೇಶ ಸೇವೆಯ ಮರ್ಮ-ನಾಯಕತ್ವದ ಲಕ್ಷ್ಯ, ಗುರಿ, ಪರಮೋದ್ದೇಶ. ಅಂಥ ನಾಯಕ ಸಭ್ಯರು. ಅವನನ್ನು ದುರ್ಗುಣರುವಿನಿಂದ ಪ್ರತ್ಯೇಕಿಸಿಕೊಳ್ಳಬೇಕಾದುದು ಪ್ರಥಮ ಕರ್ತವ್ಯ. ಇದನ್ನು ಮಾಡದವನು ಸರ್ವ ಕಾವ್ಯ ಕ್ಷೇತ್ರಗಳಲ್ಲೂ ಲೋಕಾಪಕಾರಿಯಾಗದಿರನು. ಜಾತಿ, ಲಿಂಗ, ಮತ, ಭಾಷೇಯತೆಗಳಾವುವೂ ಆದರ್ಶನಾಯಕತ್ವಕ್ಕೂ ಪ್ರಜಾತ್ವಕ್ಕೂ ಸೀಮಾರೇಖೆಯನ್ನು ಎಳೆಯಲಾರವು. ಅವುಗಳ ದಾಸರು ಮೂಢ ನಂಬಿಕೆಗಳ ಕಣಜಗಳು. ಅವುಗಳ ಈಶರಿಗೆ ಅವಿದ್ದರೂ ಅವರನ್ನು ಕೆಡಿಸಲಾರವು. ವ್ಯಾಸವು ತ್ಯಾಜ್ಯ. ಆದರೆ ಅದರ ತ್ಯಾಗಕ್ಕೆ ಕ್ರಮಗತಿ ಅಗತ್ಯ. ಆ ತ್ಯಾಗದ ಪೂರ್ಣತೆಯೇ ಮುಕ್ತಿ ಅಥವಾ ಬಿಡುಗಡೆ. ಇಂದ್ರಿಯ ದಾಸ್ಯವು ಅತ್ಯಂತ ಹೇಯವಾದ ದಾಸ್ಯ. ಅವರಿಗೆ ಇಂದ್ರಿಯಾರ್ಥಗಳಿಗಿಂತ ಹೆಚ್ಚಿನ ಯಾವ ಮೌಲ್ಯಗಳೂ ರುಚಿಸವು. ಅವರು ಅದೂರ ದೃಷ್ಟಿಯುಳ್ಳವರಲ್ಲಿ ಅಗ್ರಗಣ್ಯರು. ಅಂಥವರ ಅಧಿಕಾರ-ಪ್ರಾಧಿಕಾರಗಳು, ದುರ್ದೈವಿ ದೇಶದಲ್ಲಿ ಅಥವಾ ದುರವಧಿಗಳಲ್ಲಿ ನಮಗೆ ಪ್ರಾಪ್ತವಾಗುತ್ತವೆ. ಅದಕ್ಕೆ ಆಂತರಿಕವಾಗಿ ಬಗ್ಗದವನೇ ನಿಜವಾದ ದೇಶ ಸೇವಕ, ಅವನೇ ಮಹಾವೀರ, ಮುಕ್ತಿಗೆ ಪಾತ್ರ. ಮಿಕ್ಕವರು ಬರ್ಬರರು, ತಮಃ ಸಾಮ್ರಾಜ್ಯ ಚಕ್ರವರ್ತಿಗಳು!

ಮನು ಸ್ಮೃತಿಯಲ್ಲಿ ವರ್ಣಾಶ್ರಮ ಧರ್ಮಗಳ ಜೊತೆಗೆ (According to the scientifically tested attitudes to day) ದೇಶದ ಧರ್ಮ, ಕುಲ(ಸಂಸ್ಕೃತಿ) ಧರ್ಮಗಳನ್ನೂ ಉಲ್ಲೇಖಿಸಲಾಗಿದೆ. ದೇಶ ಧರ್ಮದ ಚಿರಂಜೀವಿತ್ವ ಕಾಲಧರ್ಮಕ್ಕಿಲ್ಲ. ಆದುದರಿಂದದೇಶದ ಸಾಂಸ್ಕೃತಿಕ ಮೂಲ ನೀತಿಗಳನ್ನು ದೇವಪ್ರೀತ್ಯರ್ಥವಾಗಿ ಆಚರಿಸುವುದು ಸಮಾಜ ವಿಜ್ಞಾನ ಸಿದ್ಧ. ದೈವ ಶ್ರದ್ಧೆಯಿಂದ ನೀತಿ ಬದ್ಧತೆ ಮುಕ್ತ ಎಂಬ ವಾದವನ್ನು ಅಖಿಲಭಾರತ ತತ್ವಜ್ಞಾನಿಗಳ ಸಂಮೇಳನವೊಂದು ಸ್ಪಷ್ಟವಾಗಿ ಖಂಡಿಸಿದೆ. ಆ ಶ್ರದ್ಧೆಯಿಲ್ಲದ ನೀತಿಯು ನೆಲಗಟ್ಟಿಲ್ಲದ ಮನೆಯಂತೆ. ಆಶ್ರದ್ಧನು ಈಗ ಆಗ ಎಂಬಷ್ಟರಲ್ಲಿ ಅಸಾಮಾಜಿಕನಾದಾನು. ಶ್ರದ್ಧಾ ಪ್ರದರ್ಶನ ಗತಿಯೂ ಅದೇ. ನೀತಿ ರಹಿತವಾದ ಶಾಸ್ತ್ರ (ವಿಚಾರಶಾಸ್ತ್ರ (ಸಹ ಅಧೋಗತಿಕಾರಕ ನೀತಿ ಎಂದರೆ ಅಹಿಂಸೆ, ಸತ್ಯ, ಅಸ್ತೇಯ, ಶೌಚ, ಇಂದ್ರಿಯ ನಿಗ್ರಹ. ಇವುಗಳಿಗೆ ವಿರುದ್ಧವಾದ ನೀತಿಗಳು ಮಿಥ್ಯಾ ನೀತಿಗಳು. ಇವು ಮುಕ್ತನಿಗೆ ಸಹಜ, ಬುದ್ಧನಿಗೆ ಪ್ರಯತ್ನ ಸಾಧ್ಯ. ನಿತ್ಯಾನಿತ್ಯವಸ್ತುವಿವೇಕ, ಇಹಾಮುತ್ರ ಫಲ ಭೋಗವಿರಾಗ, ಶಮದಮಾದಿ ಸಾಧನ ಸಂಪತ್ತು ಮತ್ತು ಮುಮುಕ್ಷುತ್ವಗಳನ್ನು ಉಕ್ತ ಪಂಚಶೀಲಗಳು ಕಲಿಸುತ್ತವೆ. ಈ ಸಾಧನ ಚತುಷ್ಟಯವನ್ನು ಅಭ್ಯಸಿಸದವನು ಗುರುವಲ್ಲ, ಶಿಷ್ಯನಲ್ಲ. ನಾಯಕನಲ್ಲ, ಅನುಯಾಯಿಯಲ್ಲ -ಮಾನವನ ಯಾವ ನಾಗರಿಕ ಚಟುವಟಿಕೆಯಲ್ಲಿಯೂ -ಎಂಬುದು ಭಾರತೀಯ ಜೀವನ ವಿಜ್ಞಾನ. ಮಿಕ್ಕ ವಿಜ್ಞಾನಗಳಿಗಿದು ರಾಜ, ಈಶ. ಈ ವಿಜ್ಞಾನವುಳ್ಳವನು ಸಾಧು, ಆದರ್ಶ ನಾಗರಿಕ; ಇದಿಲ್ಲದವನು ಪಶು ಅಥವಾ ಪಶುವಿಗಿಂತ ಕೀಳಾದವನು. ಪಶುತ್ವ ರಾಜಸ, ದೈತತ್ವ ತಾಮಸ, ದೇವ(+ಮಾನವ)ತ್ವವು ಸಾತ್ವಿಕ. ಈ ಮೌಲ್ಯಮಾನದಂಡವನ್ನು ಯಾರು ನಮ್ಮ ಸಂವಿಧಾನವನ್ನು ಬಾದಲಾಯಿಸಿಯೂ ಅಲ್ಲಗಳೆಯಲಾರರು. ಅಲ್ಲಗಳೆದವರು ದೇಶದ್ರೋಹಿಗಳು ನೀತಿಶುದ್ಧಿಗೆ ಪೋಷಕವಾದ ತರ್ಕವೇ ಸದ್ವಿಚಾರ; ದುರ್ವಿಚಾರವು ತದ್ವಿರುದ್ಧ; ಅದಕ್ಕಿಂತ ನಿರ್ವಿಚಾರ ಮೇಲು. ಪಶು ನಿರ್ವಿಚಾರಿ; ಮುಕ್ತ ಸದ್ವಿಚಾರಿ; ಅನಾಗರಿಕ(ದೈತ್ಯ) ದುರ್ವಿಚಾರಿ.

ಮೌಲ್ಯ ರಾಜ್ಯದ ಶಬ್ದ ಜ್ಞಾನ ಸರಿಯಾಗಿಲ್ಲದವರಿಗೆ ಅರ್ಥಜ್ಞಾನವಾಗದು ಅರ್ಥಜ್ಞಾನವಾಗದವರು ಅನರ್ಥಕಾರಿಗಳು ಪಶುವೂ ಮುಕ್ತನೂ ಶಬ್ದಾತೀತರು. ಶಬ್ದಶಕ್ತಿಯಿದ್ದು ಅದನ್ನು ಬೆಳೆಯಿಸಿಕೊಂಡು ಸದ್ವಿನಿಯೋಗ ಮಾಡಿಕೊಳ್ಳದ ಅಥವಾ ದುರ್ವಿನಿಯೋಗ ಮಾಡುವ ಮನುಷ್ಯರು ಪಶುವಿಗಿಂತಲೂ ಹೀನರು. ಆದುದರಿಂದ ಮಾನವರಲ್ಲಿ ೧) ಲುಬ್ಧ (ದೈತ) ೨) ಮಾನವ

(18 ನೇ ಪುಟ ನೋಡಿ)



# ಷೋಡಶ ಮಹಾಜನಪದಗಳು

—ಟಿ. ವಿ. ವೆಂಕಟಾಚಲಶಾಸ್ತ್ರಿ

ಶ್ರೀಮಾನ್ ತೋಸರೆ ವೆಂಕಟ ಸುಬ್ಬಶಾಸ್ತ್ರಿ ವೆಂಕಟಾಚಲಶಾಸ್ತ್ರಿಯವರು ಈಗ ಮೈಸೂರು ವಿ.ವಿ.ಯ ಸ್ನಾತಕೋತ್ತರ ಅಧ್ಯಯನ ಕೇಂದ್ರದಲ್ಲಿ ಅಧ್ಯಾಪಕರಾಗಿದ್ದಾರೆ. ಸದಾ ಸಂಶೋಧನಾ ಪ್ರವೃತ್ತಿಯುಳ್ಳ ಶ್ರೀಯುತರು ಹಲವಾರು ಸಂಶೋಧನಾತ್ಮಕ ಲೇಖನಗಳನ್ನು ಕನ್ನಡ ಪರಿಷತ್ಪತ್ರಿಕೆಯಂಥ ವಿದ್ವತ್ಪತ್ರಿಕೆಗಳಲ್ಲಿ ಪ್ರಕಟಿಸಿದ್ದಾರೆ. ಪ್ರಕೃತ ಕ್ರಿ. ಪೂರ್ವ 6ಶ.ದ ಮುನ್ನ ಭರತಖಂಡದ ಪ್ರಾಂತೀಯ ವ್ಯವಸ್ಥೆಯಲ್ಲಿ ಗಣರಾಜ್ಯ ಮತ್ತು ಜನಪದಗಳೆಂಬೆರಡು ವಿಧಕಂಡು ಬರುತ್ತದೆ. ಅದರಲ್ಲಿ 16 ವಿಧವಾದ ಜನಪದಗಳ ಉಲ್ಲೇಖ ಬೌದ್ಧ ಗ್ರಂಥವಾದ 'ಅಂಗುತ್ತರನಿಕಾಯ' ಎಂಬುದರಲ್ಲಿದೆ. ಅದನ್ನು ಮಾನ್ಯಲೇಖಕರು ಸಂಶೋಧಿಸಿ ಬರೆದಿದ್ದಾರೆ. ಸಂಶೋಧನೆಗೆ ಅನುಕೂಲಕರವಾದ ಲೇಖನಗಳನ್ನು ಶ್ರೀಯುತರಿಂದ ನಿರೀಕ್ಷಿಸ ಬಹುದಾಗಿದೆ. -ಸಂ.

ಸ್ತಪೂರ್ವ ಆರನೆಯ ಶತಮಾನದ ಆದಿಯಲ್ಲಿ ಭರತಖಂಡವು ಹಲವು ಸ್ವತಂತ್ರವಾದ ಪ್ರಾಂತಗಳಾಗಿ ವಿಭಾಗವಾಗಿದ್ದುದಲ್ಲದೆ ಅತ್ಯುನ್ನತವಾದ ಏಕಾಧಿಪತ್ಯ ವೆಂಬುದಿರಲಿಲ್ಲ ಬೌದ್ಧಧರ್ಮದ 'ಅಂಗುತ್ತರ ನಿಕಾಯ', 'ದೀಘನಿಕಾಯ', 'ಮಹಾವಸ್ತು' ಇಂತಹ ಗ್ರಂಥಗಳಲ್ಲಿ ಆಕಾಲದ ಮಹಾರಾಜ್ಯಗಳ ಉಲ್ಲೇಖಗಳು ಕಂಡುಬರುತ್ತವೆ. ಗೌತಮ ಬುದ್ಧನಿಗೆ ಸ್ವಲ್ಪ ಮೊದಲು ಆಸ್ತಿತ್ವದಲ್ಲಿದ್ದ ಅವನ್ನು ಗತಾನುಗತಿಕವಾಗಿ "ಸೋಳಸ ಮಹಾಜನಪದಾ" ಎಂಬುದಾಗಿ ಹೆಸರಿಸಿದೆ. ಅವು ಯಾವುವು ಎಂಬುದನ್ನು ಅಂಗುತ್ತರ ನಿಕಾಯದಲ್ಲಿ ಈ ಪ್ರಕಾರವಾಗಿ ಹೇಳದೆ. ಕಾಶಿ, ಕೋಸಲ, ಅಂಗ, ಮಗಧ, ವಜ್ಜಿ, ಮಲ್ಲ, ಚೇದಿ, ವತ್ಸ(ವಂಶ), ಕುರು, ಪಾಂಚಾಲ, ಮಚ್ಛಮತ್ಸ್ಯ ಸೂರಸೇನ, ಅಸ್ಸಕ, ಆವಂತಿ ಗಾಂಧಾರ ಕಾಂಭೋಜ, "ದೀಘನಿಕಾಯದಲ್ಲಿ ಇವನ್ನು ಕಾಶಿ-ಕೋಸಲ, ವೃಜಿ-ಮಲ್ಲ ಎಂಬುದಾಗಿ ಜೋಡಿ ಜೋಡಿಯಾಗಿ ಹೇಳಿರುವುದೂ ಉಂಟು. ಈ ಜನಪದಗಳು ಗಾಂಧಾರದಿಂದ ಬಂಗಾಳದ ಗಡಿಗಳವರೆಗೆ ವ್ಯಾಪಿಸಿದ್ದವೆಂದು ಹೇಳಬಹುದು.

ಜೈನಧರ್ಮದ 'ಭಗವತೀ, ಸೂತ್ರದಲ್ಲಿಕೂಡ ೧೬ ರಾಜ್ಯಗಳು ಹೆಸರುಗಳು ಬರುತ್ತವೆ. ಆದರೆ ಇಲ್ಲಿಯ ಹೆಸರುಗಳು ಸ್ವಲ್ಪಮಟ್ಟಿಗೆ ಬೇರೆಯೇ ಆಗಿವೆ. ಪುರಾಣಗಳಲ್ಲಿಯ ಹೇಳಿಕೆಗಳಲ್ಲಿಯೂ ಗಮನಾರ್ಹ ವ್ಯತ್ಯಾಸಗಳಿವೆ. ಬೌದ್ಧ ಮತ್ತು ಜೈನ ಧರ್ಮಗಳ ಗ್ರಂಥಗಳಲ್ಲಿ ಹೇಳಿರುವ ವೃಜಿ ಮತ್ತು ಮಲ್ಲದೇಶಗಳು ಅವೈದಿಕ ಪಂಥಗಳ ನೆಲೆಯೆಂಬ ಕಾರಣದಿಂದ ಪುರಾಣಗಳಲ್ಲಿ ಲುಪ್ತವಾಗಿರುವಂತೆ ತೋರುತ್ತದೆ. ಪುರಾಣಗಳಲ್ಲಿ ಈ ರಾಜ್ಯಗಳು ಸ್ವಯಮಾಡಳಿತ ಕೂಟಗಳಾಗಿದ್ದವು ಎಂಬುದಕ್ಕೆ ಆಧಾರಗಳು ದೊರೆಯದಿದ್ದರೂ ಗೌತಮ ಬುದ್ಧನ ಕಾಲದಲ್ಲಿ ಆ ರೀತಿಯಿದ್ದುವೆಂಬುದಕ್ಕೆ ಬೌದ್ಧಗ್ರಂಥಗಳಲ್ಲಿ ಆಧಾರಗಳುಂಟು ಕಪಿಲವಸ್ತುವಿನ ಶಾಕ್ಯರು ವೈಶಾಲಿಯ ಲಿಚ್ಛವಿಗಳು ಮಿಥಿಲೆಯ ವಿದೇಹರು-ಮುಂತಾದವರ ಕೂಟಗಳನ್ನು ಇಲ್ಲಿ ನೆನೆಯಬಹುದು. ಪಾಣಿನಿಯ (ಕ್ರಿ. ಪೂ. ಸು. ೭೦೦) ಅಷ್ಟಾಧ್ಯಾಯಿಯಲ್ಲಿ ಗಣರಾಜ್ಯಗಳಿಗೆ ಸಂಘ ಅಥವಾ ಗಣ ಎಂಬುದಾಗಿಯೂ, ಅರಸಾಳ್ವಿಕೆಯ ರಾಜ್ಯಗಳಿಗೆ 'ಜನಪದ' ಎಂಬುದಾಗಿಯೂ ಮಾತುಗಳನ್ನು ಬಳಸಿದ್ದಾನೆ. ಗಾಂಧಾರ ಅವಂತಿ ಕೋಸಲ-ಈ ಮೊದಲಾದವನ್ನು ಪ್ರಾಚ್ಯ ಜನಪದಗಳೆಂದಿದ್ದಾನೆ. ಬೌಧಾಯನ ಧರ್ಮಸೂತ್ರದಲ್ಲಿ ಸುರಾಷ್ಟ್ರ ಅವಂತಿ ಮೊದಲಾದ ರಾಜ್ಯಗಳನ್ನು ಕುರಿತಿದೆ. ಇಂತಹ ಅರಸಾಳ್ವಿಕೆಯಿಲ್ಲದ ಸ್ವಯಮಾಡಳಿತ ಕೂಟಗಳನ್ನು ಮೆಗಾಸ್ತನೀಸ್ ಕೌಟಿಲ್ಯರು ಸ್ಪಷ್ಟವಾಗಿಯೇ ಪ್ರಸ್ತಾಪಿಸಿದ್ದಾರೆ. ಅವುಗಳ ಉಲ್ಲೇಖ ಕ್ರಿ. ಶ. ೪ ನೆಯ ಶಕ ಮಾನದ ಶಾಸನಗಳಲ್ಲಿಯೂ ಕಂಡು ಬರುತ್ತದೆ.

ಕ್ರಿ. ಪೂ. ೬ನೆಯ ಶ. ಮಾನದ ಹೊತ್ತಿಗಾಗಲೇ ಪೂರ್ವೋಕ್ತವಾದ ೧೬ ರಾಜ್ಯಗಳಲ್ಲಿ ಕೆಲವು ತಮ್ಮ ಪ್ರಾಮುಖ್ಯವನ್ನು ಕಳೆದುಕೊಂಡು ಬಿಟ್ಟಿದ್ದುವು. ಕೆಲವು ಸ್ವಲ್ಪ ಕಾಲವಾದ ಮೇಲೆ ಪ್ರಬಲವಾದವು. ವೇದಗಳ ಕಾಲದಿಂ

ದೀಜೆಗೆ ಉತ್ತರ ಭಾರತದಲ್ಲಿ ಅಗ್ರಗಣ್ಯವಾಗಿದ್ದ ಕುರು ಪಾಂಚಾಲಗಳು ಈಗ ಅಷ್ಟು ಪ್ರಮುಖವಾಗಿರಲಿಲ್ಲ. ರಾಜಕೀಯವಾಗಿಯೂ ಕಳೆದ ಶ.ಮಾನದಲ್ಲಿ ಕೇಂದ್ರಸ್ಥಾನದಲ್ಲಿ ಮೆರೆದಿದ್ದ ವಿದೇಹರಾಜ್ಯದ ಹೆಸರು ಈಗ ಅಷ್ಟಾಗಿ ಕೇಳಿ ಬರುತ್ತಿರಲಿಲ್ಲ. ಹೀಗಿದ್ದು ಕೂಡ ೧೬ ಮಹಾಜನಪಹಗಳಲ್ಲಿ ಕೋಸಲ, ಮಗಧ, ವತ್ಸ, ವೃಜಿ, ಮಲ್ಲ ಮತ್ತು ಅವಂತಿ ಇವು ಪ್ರಬಲವಾಗಿದ್ದವೆಂಬು ಬೌದ್ಧ ಸಾಹಿತ್ಯದಲ್ಲಿ ಅವುಗಳ ಬಗೆಗೆ ದೊರೆಯುವ ಹೆಚ್ಚಿನ ಮಾಹಿತಿಯಿಂದಾಗಿ ಹೇಳ ಬಹುದು. ಈ ರಾಜ್ಯಗಳವರು ಬುದ್ಧನೊಡನೆ ನೇರ ಹಾಗೂ ಹತ್ತಿರದ ಸಂಬಂಧವನ್ನು ಹೊಂದಿದ್ದಂತೆತೋರು ತ್ತದೆ. ಆತನು ಈನಗರಗಳಿಗೆ ಹಲವು ಬಾರಿ ಭೇಟಿಯಿತ್ತು ಧರ್ಮಪ್ರಸಾರವನ್ನು ಯಶಸ್ವಿಯಾಗಿ ಕೈಕೊಂಡಂತೆ ಕಂಡು ಬರುತ್ತದೆ.

ಷೋಡಶ ಮಹಾ ಜನ ಪದ ಗಳಲ್ಲಿ ಮಗಧ ರಾಜ್ಯದ ಚರಿತ್ರೆಯು ಹೊರತಾಗಿ ಇತರ ರಾಜ್ಯಗಳ ವಿಚಾರವಾಗಿ ಹೆಚ್ಚಿನ ಮಾಹಿತಿ ಒಂದು ಸಮಂಜಸವಾದ ಕ್ರಮದಲ್ಲಿ ಪೂರ್ವೋಕ್ತ ಆಧಾರ ಗ್ರಂಥಗಳಲ್ಲಿ ದೊಯು ವುದಿಲ್ಲ. ದೊರೆಯುವ ಮಟ್ಟಿಗೆ ಆ ಕಾಲದ ಭಾರತೀಯ ಜನಜೀವನದ ಸ್ಥಿತಿಗತಿಗಳನ್ನು ಇಲ್ಲಿ ಸಂಕ್ಷಿಪ್ತವಾಗಿ ನಿರೂಪಿಸಬಹುದು. ಅಂಗರಾಜ್ಯವು (ಇಂದಿನ ಭಾಗಲ್ಪುರ, ಮೊಂಘೈರ್ ಜಿಲ್ಲೆಗಳ ಪ್ರದೇಶ) ವ್ಯಾಪಾರ ವಾಣಿಜ್ಯಗಳ ಪ್ರಮುಖ ಕೇಂದ್ರವಾಗಿದ್ದು ಅಲ್ಲಿಯ ವ್ಯಾಪಾರಿಗಳು ದೂರದ ಸುವರ್ಣಭೂಮಿಗೆ ಸಾಂಯಾತ್ರಿಕರಾ ಹೋಗು ತ್ತಿದ್ದರು. ಉತ್ತರ ದಕ್ಷಿಣಗಳಲ್ಲಿ ವರುಣಾ ಮತ್ತು ಅಸಿಗ ಳೆಂಬ ನದಿಗಳು ಹರಿಯುತ್ತಿದ್ದ ಕಾಶೀರಾಜ್ಯವು ಕೂಡ ಸಂಪದ್ಭರಿತವೂ ಸಮೃದ್ಧವೂ ಆಗಿದ್ದಿತು ಕೋಸಲ ರಾಜ್ಯವು (ಇಂದಿನ ಔಧ್) ಬುದ್ಧನ ಸಮಕಾಲಿನನಾಗಿದ್ದ ಪ್ರಸೇನಜಿತ್ ಎಂಬ ದೊರೆಯ ಸಂಬಂಧದಿಂದಾಗಿ ಬೌದ್ಧ ಧರ್ಮದ ಇತಿಹಾಸದಲ್ಲಿ ಗಣನೆಗೆ ಬರತಕ್ಕದ್ದಾಗಿದೆ. ಬೌದ್ಧ ಗ್ರಂಥಗಳಲ್ಲಿ ಬುದ್ಧನಿಗೂ ಪ್ರಸೇನಜಿತ್ತುವಿಗೂ ನಡೆದ ಹಲವು ಸಂದರ್ಶನ ಸಂವಾದಗಳನ್ನು ಉಲ್ಲೇ ಖಿಸಿದೆ. ಪ್ರಸೇನಜಿತ್ತುವಿನ ಮಗನು ಬುದ್ಧನಂತಹ ಮಹಾಪುರುಷನು ಜನಿಸಿದ ಶಾಖ್ಯಕುಲಕ್ಕೆ ಮೃತ್ಯು ಸ್ವರೂ ಪನಾಗಿ ಪರಿಣಮಿಸಿದ್ದು, ನಿಜವಾಗಿ ಆ ಕುಲಕ್ಕೆ ಅದು ಕೊನೆಗಾಲವೇ ಆಯಿತೆನ್ನಬಹುದು. ಜನವರ್ಗಗಳ ರಾಜ್ಯ ವಾಗಿದ್ದ ವೃಜಿಯಲ್ಲಿ ಪ್ರಸಿದ್ಧರಾಗಿದ್ದವರೆಂದರೆ ಲಿಚ್ಛವಿ ಗಳು ಮತ್ತು ವಿದೇಹದವರು. ರಾಜರ್ಷಿಯಾದ ಜನಕನ ಕಾಲದಲ್ಲಿ ವಿದೇಹವು ಪ್ರಖ್ಯಾತವಾಗಿದ್ದು, ಅದರ ರಾಜ ಧಾನಿ ಮಿಥಿಲೆ, ರಾಜಕೀಯ ಮತ್ತು ಸಾಂಸ್ಕೃತಿಕ ಕೇಂದ್ರ ವಾಗಿದ್ದಿತು. ಸಮಸ್ತ ವೃಜಿ ರಾಜ್ಯಕೂಟದ ವೈಶಾಲಿ ನಗರವನ್ನು (ಉತ್ತರ ಬಿಹಾರಿನ ಮುಜಫರ್ ಜಿಲ್ಲೆಯ ಇಂದಿನ ಬಸಾರ್) ರಾಮಾಯಣದಲ್ಲಿ 'ವಿಶಾಲಾ' ಎಂಬ ಹೆಸರಿನಿಂದ ಕರೆದು ಅದನ್ನು ಉತ್ತಮಪುರಿಯೆಂದು ಹೊಗ ಳಿದೆ. ವೈಶಾಲಿಯ ಉನ್ನತ ಸೌಧಗಳು, ಕಮಲಸರೋ ವರಗಳು ಮೊದಲಾದುವುಗಳಿಂದ ಕೂಡಿದ್ದಿತು, ನಗರದ ಸುತ್ತ ಮೂರು ಪ್ರಾಕಾರಗಳು ಒಂದೊಂದು ಗಾವುದ ಅಂತರ ದಲ್ಲಿ ನಿರ್ಮಿತವಾಗಿದ್ದವು. ಒಂದೊಂದರಲ್ಲಿಯೂ ದ್ವಾರಗಳು ಕಾವಲುಗೋಪುರಗಳು ಇರುತ್ತಿದ್ದುವು. ಬೌದ್ಧಧರ್ಮದ ಉದಯ ಕಾಲದಲ್ಲಿ ಮಲ್ಲರಾಜ್ಯಕೂಟದ ಕುಶಿನಾರಾ ಮತ್ತು ಪಾವಾ ಈ ಯೆರಡು ಕೇಂದ್ರಗಳು ಬಹು ಪ್ರಮು ಖವಾಗಿದ್ದುವೆಂದು ತಿಳಿಯುತ್ತವೆ. (ಇವುಗಳಲ್ಲಿ ಮೊದಲ ನೆಯದು ಗೋರಖ್‌ಪುರದ ಪೂರ್ವಕ್ಕೆ ೩೫ ಮೈಲಿಗಳ ಅಂತರದಲ್ಲಿರುವ ಇಂದಿನ ಕಾಸಿಯಾ ಎಂಬ ಸ್ಥಳ; ಎರಡ ನೆಯದು ಈ ಸ್ಥಳಕ್ಕೆ ೧೨ಮೈಲಿದೂರದಲ್ಲಿರುವ ಪದರಾಷೊನ ಎಂಬ ಗ್ರಾಮ), ಮಲ್ಲರನ್ನು ಮನು ವ್ರಾತ್ಯಕ್ಷತ್ರಿಯರೆಂದು ಕರೆದಿದ್ದಾನೆ; ಬೌದ್ಧಗ್ರಂಥದಲ್ಲಿ ವಾಶಿಷ್ಠರೆಂದಿದೆ. ಇವರ ಮುಖ್ಯ ಸಂಗಡಗಳೆರಡು ಬುದ್ಧನ ಮೃತಿಯ ಬಳಿಕ ಆತನ ದೇಹದ ಅವಶೇಷಗಳಿಗಾಗಿ ಭಾಗವನ್ನು ಬಯಸಿ ತಿಳಿಯುತ್ತದೆ. ಇವರಲ್ಲಿ ಹಲವರು ಬೌದ್ಧ ಮತ್ತು ಜೈನ ಮನೆತಗಳೆರಡಕ್ಕೂ ಅನುಯಾಯಿಗಳಾಗಿದ್ದರು. ಚೇದಿಗಳ ಒಂದು ಶಾಖೆ ಕಲಿಂಗ ರಾಜ್ಯದಲ್ಲಿ ಒಂದು ಅರಸುಮನೆ ತನವನ್ನು ನೆಲೆಗೊಳಿಸಿದ್ದು ಆ ರಾಜ್ಯದ ಚರಿತ್ರೆಯಲ್ಲಿ ಗಮನಿಸತಕ್ಕ ವಿಷಯ ಕೌಶಾಂಬಿಯು ರಾಜಧಾನಿಯಾ ಗಿದ್ದ ವತ್ಸದೇಶವು ಅತ್ಯಂತ ಸಂಪದ್ಭರಿತವೂ ಸಮೃದ್ಧವೂ ಆಗಿದ್ದಿತು. ಉಚ್ಚ ಶ್ರೇಣಿಯ ಹತ್ತಿಯ ತಯಾರಿಕೆಗೆ ಹೆಸರು ವಾಸಿಯಾಗಿದ್ದಿತು ಬುದ್ಧನ ಸಮಕಾಲೀನನಾಗಿದ್ದ ಉದಯ ನೆಂಬರಾಜನೇ ಭಾಸನ 'ಸ್ವಪ್ನವಾಸವದತ್ತಾ', ಹರ್ಷನ, ಪ್ರಿಯದರ್ಶಿಕಾ, ರತ್ನಾವಲೀ—ಈ ನಾಟಕಗಳ ನಾಯಕ ವ್ಯಕ್ತಿ. ಕಾಲಿದಾಸನ ಕಾಲದಲ್ಲಿಯೂ ಅವಂತಿಯಲ್ಲಿ ಈತನ ಬಗೆಗೆ ಕೆಲವು ಕಥೆಗಳು ಪ್ರಚಲಿತವಿದ್ದವು. ಮೊದಲು ಬೌದ್ಧಮತದ ಬಗೆಗೆ ಅಸಹನೆಯಿಂದಿದ್ದ ಈತನು ಕಾಲ



ಕ್ರಮದಲ್ಲಿ ಬೌದ್ಧಮತದ ಅನುಯಾಯಿಯೂದಂತೆ ತಿಳಿ ಯುತ್ತದೆ. ಕೌಶಾಂಬಿಯು ಆ ಕಾಲದ ಆರುಭಾರತೀಯ ಮಹಾನಗರಗಳಲ್ಲಿ ಒಂದಾಗಿದ್ದಿತು. ವ್ಯಾಪಾರವಾಣಿಜ್ಯಗ ಳಿಗೆ ಸಾರಿಗೆ ಸಂಪರ್ಕಗಳಿಗೆ ಕೇದ್ರವಾಗಿದ್ದಿತು. ಪ್ರಖ್ಯಾ ತಿಯಲ್ಲಿ ಇದನ್ನು ಅಂದಿನ ತಕ್ಷಶಿಲೆ. ಶ್ರಾವಸ್ತಿ, ವಾರಣಾ ಸಿ, ರಾಜಗೃಹ, ವೈಶಾಲಿ, ಈ ನಗರಗಳೊಡನೆ ಹೋಲಿಸ ಬಹುದು. ಸಿರಿವಂತ ವ್ಯಾಪಾರಿಯೂ ಸಾಮಾನ್ಯವ್ಯಾಪಾ ರಿಯೂ ನಗರದಲ್ಲಿ ಒಟ್ಟಿಗೆ ಇರುತ್ತಿದ್ದರು. ಆ ನಗರಕ್ಕೆ ದಕ್ಷಿಣದಿಂದಲೂ ಪಶ್ಚಿಮದಿಂದಲೂ ಪದಾರ್ಥಗಳೂ ಪ್ರಯಾಣಿಕರೂ ಪ್ರವಾಹವಾಗಿ ಹರಿದು ಬರುತ್ತಿದ್ದುದನ್ನು ಸುತ್ತನಿಪಾತದಲ್ಲಿ ಉಲ್ಲೇಖಿಸಿದೆ. ಬುದ್ಧನ ಕಾಲದಲ್ಲಿ ಕುರುದೇಶವು ತನ್ನ ರಾಜಕೀಯ ಪ್ರಾಮುಖ್ಯವನ್ನು ಕಳೆದುಕೊಂಡಿದ್ದಿತು. ಕುರುಗಳಲ್ಲಿ ಮೊದಲು ಅರಸಾಳ್ವಿ ಕೆಯ ಪದ್ಧತಿಯಿದ್ದು ಬಳಿಕ ಗಣತಂತ್ರ ರಾಜ್ಯಪದ್ಧತಿ ರೂಢಿಗೆ ಬಂದಿತು. ಈ ಜನರು ತಮ್ಮ ಅಗಾಧ ಪ್ರಜ್ಞಾ ವಂತಿಕೆ ಶರೀರಸ್ವಾಸ್ಥ್ಯಗಳಿಗೆ ಹೆಸರಾಗಿದ್ದರು. ಮೊದಲು ಅರಸೊತ್ತಿಗೆಯ ರಾಜ್ಯವಾಗಿದ್ದು ಕ್ರಿ. ಪೂ. ೬-೫ ನೆಯ ಶತಮಾನಗಳಲ್ಲಿ ಗಣತಂತ್ರ 'ಸಂಘ, ವೆನಿಸಿದ ಪಾಂಚಾಲ ರಾಜ್ಯ ಪ್ರಾಚೀನಕಾಲದಿಂದಲೇ ಉತ್ತರ ದಕ್ಷಿಣ ಪಂಚಾ ಲಗಳಾಗಿ ವಿಭಾಗವಾಗಿದ್ದಿತು. ಬುದ್ಧನ ಕಾಲದಲ್ಲಿ ಮತ್ಸ್ಯ ರಾಜ್ಯಕ್ಕೆ ಕುರುರಾಜ್ಯದ ವಿಷಯದಲ್ಲಿ ನೋಡಿರುವಂತೆಯೇ ಯಾವ ರಾಜಕೀಯ ಪ್ರಾಮುಖ್ಯವೂ ಇರಲಿಲ್ಲ. ಈ ಜೆಗೆ ವಿಶಾಖಪಟ್ಟಣದ ಪ್ರದೇಶದಲ್ಲಿ ಮತ್ಸ್ಯರ ರಾಜಕೀಯ ಒಂದು ಶಾಖೆ ಕಂಡುಬಂದಿದೆಯೆಂಬುದು ಚರಿತ್ರೆಯ ದೃಷ್ಟಿಯಿಂದ ಗಮನಿಸತಕ್ಕ ಸಂಗತಿ. ಶೂರಸೇನ ರಾಜ್ಯವು ಗ್ರೀಕ್ ಲೇಖಕರಿಂದಲೂ ಉಲ್ಲೇಖಗೊಂಡಿದೆ. ಶೂರಸೇ ನರಾಜನಾದ ಅವಂತಿಪುತ್ರನು ಬುದ್ಧನ ಮುಖ್ಯ ಶಿಷ್ಯ ರಲ್ಲಿ ಮೊದಲಿಗನೆಂಬುದು ಗಮನಾರ್ಹವಾಗಿದೆ. ಈತನ ಪ್ರೋತ್ಸಾಹದಿಂದ ಮಥುರಾ ಪ್ರಾಂತದಲ್ಲಿ ಬೌದ್ಧ ಧರ್ಮ ವು ಆಶ್ರಯವನ್ನು ಪಡೆಯಿತು. ಆದರೆ ಮೆಗಾಸ್ತನೀಸನ ಕಾಲಕ್ಕೆ ಮಥುರೆ ಕೃಷ್ಣಪೂಜೆಯ ಸ್ಥಾನವಾಗಿ ಮಗಧ ರಾಜ್ಯದ ಭಾಗವಾಯಿತು. ಅಶ್ವಕ, ಅಶ್ಮಕ ಅಸ್ಸಕ, ಎಂಬ ಹೆಸರುಗಳಿಂದ ಕರೆಯಲ್ಪಟ್ಟಿರುವ ಅಸ್ಸಕ ರಾಜ್ಯ ವು ಬೌದ್ಧಗ್ರಂಥಗಳಲ್ಲಿ ಮಹಾಜನಪದವೆಂದು ಖ್ಯಾತವಾ ಗಿದೆ. ಅದು ಬೌದ್ಧ ಗ್ರಂಥಗಳ ಪ್ರಕಾರ ಆಂಧ್ರವೆಂದೂ ಅರ್ಥಶಾಸ್ತ್ರದ ಟೀಕಾಕಾರ ಭಟ್ಟಸ್ವಾಮಿಯ ಪ್ರಕಾರ ಮಹಾರಾಷ್ಟ್ರವೆಂದೂ ತಿಳಿಯುವುದು. ಕೋಸಲ ವತ್ಸ ಮಗಧ ರಾಜ್ಯಗಳನ್ನು ಬಿಟ್ಟರೆ ನಾಲ್ಕನೆಯ ಮಹಾರಾ ಜ್ಯವಾಗಿದ್ದ ಅವಂತಿಯೂ ಬೌದ್ಧ ಧರ್ಮೋದಯದ ಕಾಲದಲ್ಲಿ ಏಳಿಗೆಯಲ್ಲಿದ್ದಿತು. ಚರಿತ್ರೆಯಲ್ಲಿಯೂ ಸಾಹಿ ತ್ಯದಲ್ಲಿಯೂ ಪ್ರಖ್ಯಾತವಾಗಿರುವ ಉಜ್ಜಯಿನಿ ಮಾಹಿಷ್ಮತಿ ವಿದಿಶೆ ದಶಾರ್ಣ ಮೊದಲಾದವು. ಈ ರಾಜ್ಯದ ಪ್ರಸಿದ್ಧ ನಗರಗಳು ಉಜ್ಜಯಿನಿಯು ಬೌದ್ಧಧರ್ಮದ ಒಂದು ಮುಖ್ಯ ಸ್ಥಾನವೆನಿಸಿದ್ದು, ಪ್ರಮುಖ ಥೇರ ಅಥವಾ ಥೇರಿ ಗಳು ಇಲ್ಲಿಯೇ ಹುಟ್ಟಿದರು ಅಥವಾ ನೆಲಸಿದರು ಎಂಬು ದು ಆ ಧರ್ಮದ ಚರಿತ್ರೆಯ ದೃಷ್ಟಿಯಿಂದ ಗಮನಾ ರ್ಹವಾಗಿದೆ. ಗಾಂಧಾರ ಅಥವಾ ಗಂಧರ್ವವಿಷಯದ ರಾಜಧಾನಿಯಾದ ತಕ್ಷಶಿಲೆ ವ್ಯಾಪಾರ ಕೇಂದ್ರವೂ ವಿದ್ಯೆ ಯ ಪ್ರಾಚೀನ ಪೀಠವೂ ಆಗಿ ವಿಖ್ಯಾತವಾಗಿದ್ದಿತು. ಪ್ರಾಚೀನ ಸಾಹಿತ್ಯದಲ್ಲಿಯೂ ಅಶೋಕನ ಶಾಸನಗಳ ಲ್ಲಿಯೂ ಗಾಂಧಾರ ವಿಷಯದೊಳಗೇ ಕಾಂಭೋಜವು ಸೇರಿಸಲ್ಪಟ್ಟಿದೆ. ಕೌಟಿಲ್ಯನ ಕಾಲದಲ್ಲಿ ಇಲ್ಲಿ ಸಂಘ ಪದ್ಧ ತಿಯ ಸರ್ಕಾರವಿದ್ದಂತೆ ತಿಳಿಯುವುದು.

ಭಾರತದ ಚರಿತ್ರೆಯಲ್ಲಿ ಖಚಿತವಾದ ನೆಲೆ ಗಟ್ಟಿನ ಮೇಲೆ ಬರೆಯಲು ಆರಂಭಿಸುವುದಕ್ಕೆ ಕ್ರಿ.ಪೂ. ೬ ನೆಯ ಶ.ದ ಆರಂಭದಿಂದಷ್ಟೇ ಸಾಧ್ಯ. 'ಅಂಗುತ್ತರ ನಿಕಾ ಯ'ದಲ್ಲಿ ಉಲ್ಲೇಖವಾಗಿರುವ ಪೂರ್ವೋಕ್ತವಾದ ೧೬ ದೇಶಗಳು ಕ್ರಿ.ಪೂ ೫೫೦ರಮೊದಲಲ್ಲಿ ಪ್ರಖ್ಯಾತವಾಗಿದ್ದವು. ಚಿಕ್ಕ ರಾಜ್ಯಗಳಲ್ಲಿ ಸುಮಾರು ೫ ಲಕ್ಷ ಜನರ ಶಾಕ್ಯರ ರಾಜ್ಯವನ್ನು ಹೇಳಬಹುದು. ಶಾಕ್ಯರು ರೋಹಿಣೀ ನದಿಯ ನೀರನ್ನು ಕೃಷಿಗೆ ಬಳಸಿಕೊಳ್ಳುತ್ತಿದ್ದುದರಿಂದ ಆ ಬಗೆಗೆ ನೆರೆಯ ರಾಮಗ್ರಾಮದ ಕೊಲಿಯರೊಡನೆ ಸಣ್ಣಪುಟ್ಟ ಜಗಳಗಳಾಗುತ್ತಿದ್ದಂತೆ ತೋರುತ್ತದೆ. ಬೌದ್ಧಗ್ರಂಥವೊ ಂದು ಇಂತಹ ಒಂದು ಜಗಳವನ್ನು ವಿವರವಾಗಿ ಉಲ್ಲೇ ಖಿಸಿದೆ. ಇಂತಹ ಸಂದರ್ಭದಲ್ಲಿ ಕೊಲಿಯರು ಶಾಕ್ಯರಲ್ಲಿ ಪ್ರಚಲಿತವಿದ್ದ ಸೋದರಿವಿವಾಹದ ಪದ್ಧತಿ ಯನ್ನು ಟೀಕಿಸಿದಹಾಗೆ ತೋರುತ್ತದೆ. ಇನ್ನು ಭಗ್ಗ ರೆಂಬವರು ಐತರೇಯ ಬ್ರಾಹ್ಮಣದಲ್ಲಿ, ಭಾರತ -ಹರಿ ವಂಶಗಳಲ್ಲಿ ಉಲ್ಲೇಖಿಸಲ್ಪಟ್ಟಿರುವ ತುಂಬ ಹಳೆಯ ಕುಲ

ದವರು. ಮುಂದೆ ಮೌರ್ಯರೆಂಬ ಪ್ರಸಿದ್ಧ ಮನೆ ತನವಾಗಿ ಸಾಮ್ರಾಜ್ಯವನ್ನು ಕಟ್ಟಿದ ಮೋರಿಯರು ಕ್ರಿ.ಪೂ.೬ನೆಯ ಶ ಮಾ ದಲ್ಲಿಯೇ ಇದ್ದವರು. ಈ ರಾಜ್ಯಗಳ ಗಣಕೂಟ ಗಳಲ್ಲಿ ಉನ್ನತಾಡಳಿತ ಸಂಸ್ಥೆಯಾಗಿ ಒಂದು ಕೇಂದ್ರ ಜನಪ್ರಿಯ ಸದಸ್ಯಕೂಟವಿದ್ದಿತು. ಚಿಕ್ಕವರುದೊಡ್ಡವರು ಎಲ್ಲರೂ ಆದರ ಸದಸ್ಯರಾಗಿ ರಾಜ್ಯದ ವ್ಯವಹಾರಗಳನ್ನು ಒಟ್ಟಿಗೆ ಚರ್ಚಿಸುತ್ತಿದ್ದರು. ಮೊದಲೂ ಅರಸಾಳ್ವಿಕೆಯ ಕೂಟಗಳಿದ್ದು, ಅರಸರ ದುರಾಡಳಿತವೋ ದೌರ್ಜನ್ಯವೋ ಕಾರಣವಾಗಿ ಅದು ಅಳಿದು ಅಪ್ರಜಾತಂತ್ರವು ನೆಲೆಸಿತೆಂದು ತೋರುತ್ತದೆ. ಬೌದ್ಧಜೈನ ಧರ್ಮಗಳೆರಡೂ ಸ್ವಯಮಾಡಳಿತ ರಾಜ್ಯಕೂಟಗಳಲ್ಲಿಯೇ ಸಾಮಾನ್ಯವಾಗಿ ಪೋಷಣೆಗೊಂಡವು; ಧರ್ಮಪ್ರಸಾರಕ್ಕೆ ಮುಖ್ಯ ಪ್ರೋತ್ಸಾಹಕರನ್ನು ಪಡೆದುಕೊಂಡವು. —

---

(14 ನೇ ಪುಟದಿಂದ)

೩) (ರಾಜಸ) ಮತ್ತು ದಿವ್ಯ (ಸಾತ್ವಿಕ) ಉತ್ತರೋತ್ತರ ತಾರತಮ್ಯವನ್ನು ಗುರುತಿಸಿದವರ ಪ್ರಕಾರ ಮಾನವರು ಪಶುಗಳು. ಅವರು ದಾನವರಾದರು ಅಥವಾ ದೇವತಾ ಗುಣಸಂಪನ್ನರಾವಾರು–ಮನಸ್ಸು ಮಾಡಿದರೆ. ದಿವ್ಯರು (ದೇವಮಾನವರು) ಮುಕ್ತ್ಯುನ್ಮುಖರು ಅಥವಾ ಮುಕ್ತರು. ಜಗತ್ತಿಗೆ ಇಂಥ ತತ್ವವಿವೇಕದ "ಛಾಲೆಂಜನ್ನು" ಕೊಟ್ಟ ಭಾರತವೀಗ ಎತ್ತ ಸಾಗಿದೆ? ಬಿಳಿಯರ ಅಂಧಾನುಕರಣ ಮಾಡುವವರೇ, ಧನಿಕರ ಮತ್ತು ಕಾಮುಕರ ಅಂಧಾನುಯಾಯಿಗಳ ಹಾಗೂ ನೀಚ ಸ್ವಾರ್ಥವನ್ನು ಗೂಢವಾಗಿ ಸಾಧಿಸಿಕೊಳ್ಳುತ್ತಾ ಪ್ರಕಟವಾಗಿ ಅಮರವಾಣಿಗಳನ್ನೊ ವಿಜ್ಞಾನ ಘಾಗಗಳಿಂದ ತುಂಬುತ್ತಾ ಹೋಗಿದೆ. ಇದು ನಮ್ಮ ಇತಿಹಾಸದ ದುರಂತಾವಧಿ ಈ "ಟ್ರಾಜಿಡಿ"ಯನ್ನು "ಕಾವಿ.ಡಿ"ಯನ್ನಾಗಿ ಪರಿವರ್ತಿಸಲು ಅಹೋರಾತ್ರಿ ಶ್ರಮಿಸುವ ಸಂಸ್ಥೆಯೇ ನಿಜವಾದ ವಿದ್ಯಾಸಂಸ್ಥೆ ಅಗ್ರಹಾರ. ಸಿದ್ಧಗಂಗೆಯ ಪಾವನತೆಗೆ ಇದೊಂದೇ ಅಳತೆಗೋಲು–ಅಲ್ಲವೆ? —

---

## ಮನೆ ಮೈಲಿಗೆಯಾಗಿದೆ !

ಆಯ್ದಕ್ಕಿ ಮಾರಯ್ಯನವರು ನಿತ್ಯವು ಗದ್ದೆಯಲ್ಲಿ ಬಿದ್ದ ಅಕ್ಕಿಯನ್ನು ಆಯ್ದು ಮನೆಗೆ ತರಬೇಕು. ಅದರಲ್ಲಿ ಜಂಗಮರಿಗೆ ಎಡೆಬಡಿಸಿ ಮಿಕ್ಕ ಪ್ರಸಾದವನ್ನು ತಾವು ಉಣ್ಣಬೇಕು. ಒಂದೊಂದು ದಿನ ಸಂಜೆಯಾದರೂ ಕಾಳು ಸಿಕ್ಕುತ್ತಿರಲಿಲ್ಲ. ಸಿಕ್ಕರೂ ಜಂಗಮ ನಿವೇದನೆಗೆ ಸಾಕಾಗುತ್ತಿತ್ತು. ಹೀಗಾಗಿ ವಾರದಲ್ಲಿ ಐದಾರು ಶಿವರಾತ್ರಿ!

ಬಸವಣ್ಣನವರಿಗೆ ಒಂದು ದಿನ ಮಾರಯ್ಯನ ಮೇಲೆ ದಯೆ ಬಂತು. ಒಂದು ಚೌಕದಲ್ಲಿ ಹೊನ್ನು ಕಟ್ಟಿ ಸೇವಕನಿಗೆ ಕೊಟ್ಟು ಮಾರಯ್ಯನ ಮನೆಯಲ್ಲಿ ಇಟ್ಟುಬರಲು ಹೇಳಿದರು. ಸೇವಕ ಇಟ್ಟುಹೋದ. ಮಾರಯ್ಯನವರು ಬಂದ ಕೂಡಲೇ ಕೇಳಿದರು "ಮನೆ ಮೈಲಿಗೆ ಏಕಾಗಿದೆ? ಯಾರು ಬಂದ್ದಿವರು?" ಅವರ ಸತಿ, "ಯಾರೂ ಇಲ್ಲ ಅಣ್ಣನವರಿಂದ ಏನೋ ಗಂಟು ಬಂದಿದೆ. ಅಲ್ಲಿದೆ ನೋಡಿರಿ" ಮಾರಯ್ಯನವರು ಅದರ ವಾಸನೇ ತಿಳಿದೇ ಹೇಳಿದರು. "ಅದನ್ನು ಹೊರಗೆ ಹಾಕಿ ಮನೆ ಶುದ್ಧಗೊಳಿಸು ಕೈಯಿಂದ ಮುಟ್ಟಬೇಡ. ಕಟ್ಟಿಗೆಯಿಂದ ದೂರ ಎಸೆ"

—ವೆಂಕಟಾಚಲಮಾನಾಚಿ

---

ತಂತ್ರಿವಾದ್ಯವು ಲೇಸು! ಮಂತ್ರಿಯು ಕೆಳಿಲೇಸು।
ಯಂತ್ರವಾಹಕನ ದಯೆ ಲೇಸು–ಜಗದಿ
ಸ್ವಾತಂತ್ರ್ಯವೇ ಲೇಸು ಸರ್ವಜ್ಞ ॥

—ಸರ್ವಜ್ಞಮೂರ್ತಿ







# ಹಾರವ ಹಾಕುವರು

ಎಂ. ಜಿ. ವೆಂಕಟೇಶಯ್ಯ

ಜೇನದು ಗುಂಪಿನ ಗೂಡಿಂದ ಹಾರಿತು ಸೇರಿತು
ಸೊಂಪಾಗಿ–ಗುಂಪಾಗಿ।
ಕುಣಿಯಿತು ಗುಂಪದು ಗಾಳಿಯಲಿ
ವಿವಾಹ ಕುದುರಿತು ತಕ್ಷಣದಲ್ಲಿ – ಆ ಕ್ಷಣದಲ್ಲಿ ॥೧॥

ಕಾಮವ ಕಾಣುತ ಮದು ಮಗ ರಾಣಿಯನಪ್ಪಿದ-
ನೊಮ್ಮೆ, – ಮತ್ತೊಮ್ಮೆ।
ಆರೆಕೊರೆ ಪ್ರಾಣದ ಕೂಟದಿ ಬಿಡುಗಡೆಯಾಯ್ತೊ,
ಅಲ್ಲಿಂದ – ಶವದಿಂದ ॥೨॥

ರಾಣಿಯು ತಿಂದಳು ಕುಣಿದಳು ಪತ್ತು ಸಾವಿರ
ಜೀವ ಬೆಳೆಯಲು–ಬೆಳೆಯಲ್ಲೂ।
ಹೆತ್ತಳು – ಹೆತ್ತಳು – ಹೆತ್ತಳೇ ಸಾಕಿ
ಬೆಳಯನ್ನು ॥೩॥

ಸೃಷ್ಟಿಯುರ್ವೀತಳ ದೊಳಗೆ ಹೆಣ್ಣುಗಂಡು – ಬೆಳೆಗಾಗಿ
ಬೆಳೆಗಾಗಿ।
ಗಂಡನ ಪ್ರಾಣವ ಹೀರುತಲಿ
ರಾಣಿಯು ಹೆರುವಳು – ಮಕ್ಕಳನ
ಸಾಸಿರ ಮಕ್ಕಳನ ॥೪॥

ಮಕ್ಕಳು ಹೀರುತ – ಕೂಡುತ ತಂದಿಡುವವು
ಹೊಸ ಜೀವ-ಸವಿಜೇನ।
ಮಾನವ ಕಾಯುತ ಸಮಯವ
ಠಕ್ಕನ ತೆರದಲಿ ಬಡಿವನದ
ಕದಿ ವನದ ॥೫॥

ಮುಟ್ಟಲು ಹೋದನು ತುಂಟನು
ಕೃಷ್ಣ ಜೇನಿನ ಗೂಡೊಂದ।
ಆಗೂಡೊಂದ।
ರಾಣಿಯು ನೋಡುತ – ಬಿಟ್ಟಳು
ತನ್ನಯ ರೆಕ್ಕೆಯ ಹುಳವನ್ನ
ಜೇನು ಹುಳವನ್ನ ॥೬॥

ಹುಳುವದು ಹಾರಿತು - ಹತ್ತಿತು
ಕೃಷ್ಣನ ಕಪ್ಪಿನ ಮೂಗನ್ನ।
ಕರಿಮೂಗನ್ನ।
ಕೂಡಲೆ ಕಚ್ಚಲು ಬಾಲದಿ
ಅತ್ತಿತು ಚೀರುತ ಮಗುವಾಗ
ಆ ಮಗುವಾಗ ॥೭॥

ಸುತ್ತಲು ಕುಣಿಯುತಲಿದ್ದಾ
ಮಕ್ಕಳು ಕೇಳುತಲಳುವಾ
ಆ ಅಳುವಾ।
ಚಪ್ಪಳೆ ತಟ್ಟುತ ನಕ್ಕವು
ಕೆಂಪನ–ಮೂಗನ ನೋಡುತಲಿ
ನೋಡುತಲಿ ॥೮॥

ಗೂಡನು ಮುಟ್ಟಲು ಹೋದರೆ
ಹುಳುಗಳುಕಡಿದವು ನೋಡಯ್ಯ
ನೀ ನೋಡಯ್ಯಾ।
ದೇಶದ ಜೇನನು ಕದಿಯಲು
ಹೋದರೆ ನಗುತಲಿ ಹಾರವ
ಹಾಕುವರು ॥೯॥

ಮಿಥ್ಯದ ಮಾತದು ಹಿತವಯ್ಯ
ಸತ್ಯದ ಮಾನವ ಬೇಡಯ್ಯ
ಬೇಡೇ – ಬೇಡಯ್ಯ।
ದೇವರ ಮಗನವ ಬೇಡಯ್ಯ
ಕಳ್ಳನೆ ಜನರಿಗೆ ಬೇಕಯ್ಯ
ಬಲು ಬೇಕಯ್ಯ ॥೧೦॥

ಜಾನಪದ ಕಥೆ

# ಗಾಜಿನ ಕಂಬ

—ಮಾದನಹಳ್ಳಿ ವೆಂಕಟಾಚಲ

ಗಂಡ ಹೆಂಡಿರ ನಡುವೆ ಮುಳ್ಳಾಗಿದ್ದ ನಾದಿನಿಯನ್ನು ಕೊಲ್ಲಲು ಅತ್ತಿಗೆ ಪ್ರಯತ್ನ ಪಟ್ಟಳು. ಹಿತ್ತಲಲ್ಲಿ ಸತ್ತು ಬಿದ್ದಿದ್ದ ಹಸಿರು ಹಾವನ್ನು ತಂದು ಕತ್ತರಿಸಿ ಕಡುಬಿನಲ್ಲಿಟ್ಟು ತಿನ್ನ ಕೊಟ್ಟಳು. ವಿಧಿವಶಾತ್ ಅದರಿಂದ ಪಾರಾದಳು. ಆದರೂ ಅತ್ತಿಗೆ ಅಷ್ಟಕ್ಕೇ ಸುಮ್ಮನಾದಳೆ? ನಾದಿನಿಯನ್ನು ಕಾಡಿನಲ್ಲಿ ಬಿಟ್ಟು ಬರುವಂತೆ ತನ್ನ ಗಂಡನಿಗೆ ಹೇಳಿದಳು. ಆಗ ಆತ ತಂಗಿಯ ಮೇಲೆ ಪ್ರೀತಿಯಿದ್ದರೂ ಹೆಂಡತಿಯ ಮೋಹ ಜಾಲಕ್ಕೆ ಸಿಕ್ಕಿ ತಂಗಿಯನ್ನು ಕಗ್ಗಾಡಿನಲ್ಲಿ ಬಿಟ್ಟು ಬಂದ. ಮುಂದೇನಾಯಿತು? ...... ಮಾನ್ಯ ಲೇಖಕರ ಈ ಜಾನಪದ ಕಥೆಯನ್ನು ಓದಿ ತಿಳಿಯಿರಿ. -ಸಂ

ಒಂದು ಊರಿನಲ್ಲಿ ಅಣ್ಣ, ಅತ್ತಿಗೆ ಮತ್ತು ನಾದಿನಿ ವಾಸವಾಗಿದ್ದರು. ಸಂಸಾರವೇನೋ ಸಮತೂಕವಾಗಿ ಸಾಗುತ್ತಿತ್ತು. ಅತ್ತಿಗೆ, ನಾದಿನಿಯನ್ನು ಕಂಡರೆ ಸಹಿಸುತ್ತಿರಲಿಲ್ಲ. ಆ ಹುಡುಗಿ ತಬ್ಬಲಿ. ತಂದೆ, ತಾಯಿ ಯಾರು ಇರಲಿಲ್ಲ. ಅದಕ್ಕೋಸ್ಕರ ಅಣ್ಣನ ಮನೆ ಹಿಡಿದಿದ್ದಳು. "ನಾದಿನಿಯನ್ನು ಕೊಂದರೆ ನಾವಿಬ್ಬರೂ ಸುಖವಾಗಿರಬಹುದಲ್ಲಾ", –ಎಂದು ಯೋಚಿಸಿದ್ದಳು ಅತ್ತಿಗೆ.

ಒಂದು ದಿನ ಹಬ್ಬ ನಡೆಯುತ್ತಿತ್ತು. ಅಣ್ಣ ತಂಗಿ ಇಬ್ಬರೂ ಪಕ್ಕದ ಕಾಡಿಗೆ ಹೋಗಿ ಸೌದೆ ತಂದು ಒಳಗೆ ಹಾಕಿದರು. ಸ್ನಾನಮಾಡಿ, ದೇವರ ಪೂಜೆಮಾಡಿದರು. ಅತ್ತಿಗೆ ಎಂದಿಲ್ಲದ ಪ್ರೀತಿ-ವಾತ್ಸಲ್ಯದಿಂದ ನಾದಿನಿಯನ್ನು ಕರೆದಳು. ಬಾಮ್ಮಾ.. ತಿಂಡಿಗೆ ನೀನು ಮೊದಲು ತಿನ್ನು. ನಂತರ ಅವರು ತಿನ್ನುತ್ತಾರೆ; ಇಲ್ಲಾ ಅತ್ತಿಗೆ, ನಾನು, ಅಣ್ಣ ಒಟ್ಟಿಗೆ ತಿಂಡಿ ತಿನ್ನುತ್ತೇವೆ; ಎಂದು ಹೇಳಿದಳು. ಅತ್ತಿಗೆ ಕೈ...., ಕೈ...., ಹಿಸುಕಿದಳು!

ಅತ್ತಿಗೆ ಆದಿನ ಒಂದು ಉಪಾಯ ಮಾಡಿದಳು. ನಾದನಿಯನ್ನು ಹೇಗಾದರೂ ಕೊಲ್ಲಬೇಕೆಂದು ಆಲೋಚಿಸಿದ್ದಳು; ಮನೆಯ ಹಿತ್ತಲಿನಲ್ಲಿ ಒಂದು ಹಸಿರು ಹಾವು ಸತ್ತು ಬಿದ್ದಿತ್ತು. ಅದನ್ನು ಅತ್ತಿಗೆಯು ತಂದು, ಸಣ್ಣ ಸಣ್ಣ ಚೂರುಮಾಡಿ, ಚೆನ್ನಾಗಿ ಬೇಯಿಸಿ ಕಡುಬಿನ ಹಿಟ್ಟಿಗೆ ಹಾಕಿ, ಕಡುಬನ್ನು ಪ್ರತ್ಯೇಕವಾಗಿ ಮಾಡಿದ್ದಳು.

ಸರಿ, ಅಣ್ಣ ತಂಗಿ ಇಬ್ಬರೂ ತಿಂಡಿಗೆ ಕುಳಿತರು. ತಂಗಿ ಕಡುಬನ್ನ ಒಂದು ಚೂರು ಬಾಯಿಗೆ ಹಾಕಿದಳು. ತಕ್ಷಣ, ಮುಖವನ್ನು ಸಿಂಡರಿಸಿ, ಅಣ್ಣಾ ಈ ಕಡುಬನ್ನು ತಿಂದು ನೋಡು; ಏಕೋ ಹಸಿರಾಗಿದೆ ಎಂದಳು. ಅಣ್ಣ, ಆ ಚೂರನ್ನು ತೆಗೆದುಕೊಂಡು ಬಾಯಿಗೆ ಇಡಬೇಕು. ಅನ್ನುವಷ್ಟರಲ್ಲಿ, "ರ್ರೀ .... ಅದು ತಿನ್ನಬೇಡಿ. ಅವಳಿಗೂ ಬೇರೊಂದು ಕೊಡುತ್ತೇನೆ; ಎಂದಳು. ಗಂಡನಿಗೆ ಸಹಿಸಲಾರದ ಸಿಟ್ಟು ಬಂದು, ಹೆಂಡತಿಯನ್ನು ಗದರಿಸಿದನು. ಅದಕ್ಕವಳು, 'ಅಲ್ಲಾ ರ್ರೀ...., ಇದು ತಳದ್ದು ಅದಕ್ಕೇ ಹಸಿರು ಬಣ್ಣ ಬಂದಿದೆ, ಎಂದು ಜಾರಿಕೊಂಡಳು. ನಾದಿನಿಯ ಕಣ್ಣು ಹನಿಗೂಡಿತ್ತು. ಅತ್ತಿಗೆ ಮನಸಿನಲ್ಲಿ 'ಎಲಾ, ಇವಳ ಇದಕ್ಕೂ ಜಗ್ಗಲಿಲ್ಲವಲ್ಲ ,'ಎಂದು ತಳಮಳಿಸಿದಳು.

ಸುಮಾರು ಐದು-ಆರು ದಿನಗಳು ಕಳೆದಿರಬಹುದು. ಒಂದು ದಿನ ಅತ್ತಿಗೆ "ನನಗೆ ತಲೆ ನೋವು. ಏಕೋ ತುಂಬಾ ಸಿಡಿಯುತ್ತಿದೆ. ತಡೆದುಕೊಳ್ಳುವುದಕ್ಕೆ ಆಗುತ್ತಿಲ್ಲ. " ಎಂದು ಬೇಕು-ಬೇಕಾದ ನೆಪವನ್ನು ಹೇಳಿಕೊಂಡು ಹಾಸಿಗೆ ಹಿಡಿದಳು. ಹೆಂಡತಿಗೆ ಆದ ತಲೆನೋವನ್ನು ಕಂಡು, ಗಂಡ ಗಾಬರಿಯಾದ. ಏನೇ ಇದು? ಏಕೆ ಹೀಗೆ ಬಡಿದುಕೊಳ್ಳುತ್ತಿದ್ದೀಯಾ? ಏನ್ ಔಷಧಿ ತರಬೇಕು? ಎಂದು ಕೇಳಿದ. "ನೋಡಿ, ನನ್ನ ಕಾಯಿಲೆ ವಿಚಿತ್ರವಾದುದು ನಾನು ಸಾಯುವವರೆವಿಗೂ ಈ ಕಾಯಿಲೆ ವಾಸಿಯಾಗುವುದಿಲ್ಲ. ನಿಮ್ಮ ತಂಗಿಯನ್ನು ಏನಾದರೂ ಮಾಡಿ ದೂರ ಬಿಟ್ಟು ಬರಬೇಕು. ಇಲ್ಲವೇ ಕೊಂದು ಬರಬೇಕು! ಆಗಲೇ ನನ್ನ ಕಾಯಿಲೆ ವಾಸಿ", ಎಂದಳು.

ಗಂಡನಿಗೆ ಹೆದರಿಕೆಯಾಯಿತು. ಹೆಂಡತಿ ಚಾಮುಂಡಿ ತರಹ! ಕಣ್ಣಲ್ಲಿ ಹನಿಗೂಡಿತು. 'ಇತ್ತದರಿ, ಅತ್ತ ಪುಲಿ' ಎಂಬಂತೆ ಇತ್ತು ಆತನ ಸ್ಥಿತಿ. ತಂಗಿಯ ಮೇಲಿದ್ದ ಮಮತೆ ಕರಗಿ ನೀರಾಯಿತು.

ವಿಧಿಯಿಲ್ಲದೆ ಹೆಂಡತಿಯ ಮಾತನ್ನು ಕೇಳಬೇಕಾಯಿತು. ಒಂದು ದಿನ ಸಾಯಂಕಾಲ ತಂಗಿಯನ್ನು ಕರೆದು 'ತಂಗಿ, ಈ ದಿನ ಕಾಡಿಗೆ ಹೋಗಿ, ಬೇಕಾದಷ್ಟು ಸೌದೆ ತರೋಣ. ತಂದು ಈ ಊರಲ್ಲಿ ಮಾರೋಣ, ನೀನೂ ಜೊತೆಗೆ ಬಾ', ಎಂದನು. ತಂಗಿ ಸಂತೋಷದಿಂದ ಒಪ್ಪಿಕೊಂಡಳು.

ಮೊಸರು ಅನ್ನ, ಸಜ್ಜಿಗೆ, ರೊಟ್ಟಿ. ಎಲ್ಲಾ ಕಟ್ಟಿಕೊಂಡು ಕಾಡಿನಲ್ಲಿ ಬಹುದೂರ ನಡೆದುಕೊಂಡು ಹೋದರು. ಹುಣ್ಣಿಮೆಯ ಚಂದ್ರ ಹಾಲಿನಂತೆ ಪ್ರಕಾಶಿಸುತ್ತಿದ್ದ. ಒಂದು ಮರದ ಕೆಳಗೆ ಇಬ್ಬರೂ ಕುಳಿತು, ತಾವು ತಂದಿದ್ದ ತಿಂಡಿಯನ್ನು ತಿಂದರು. 'ಅಣ್ಣಾ, ಯಾವಾಗ ಸೌದೆ ಕಡಿಯುವುದು? ಎಂದಳು ತಂಗಿ. 'ಅಯ್ಯೋ, ಸ್ವಲ್ಪ ಮಲಗೋಣ. ನಂತರ ಕಡಿದರಾಯಿತು', ಎಂದ.

ಮಲಗಿದ ತಂಗಿಗೆ ಗಾಢ ನಿದ್ರೆ ಆವರಿಸಿತ್ತು. ಅಣ್ಣ ಎದ್ದು ಸಂಕಟದಿಂದ ಕೊರಗಾಡಿದ. ತಂಗಿಯ ಮಗ್ಗಲಿಗೆ ಒಂದು ತುಂಡು ಕೊರಡನ್ನು ಇಟ್ಟು, ಪಂಚೆಯನ್ನು ಹೊದಿಸಿ ಹೊರಡಲು ಅನುವಾದ. ಆಗ ಮತ್ತೊಮ್ಮೆ ಮುಗ್ಧೆಯ ಮುಖ ನೋಡಿ ಹೊರಟು ಹೋದ.

ದುಃಖದಿಂದ ಮನೆಗೆ ಬಂದ ಗಂಡನನ್ನು ನೋಡಿ, ಹೆಂಡತಿಗೆ ಬಹಳ ಸಂತೋಷವಾಯಿತು. "ರ್ರೀ..., ನನ್ನ ತಲೆ ನೋವೆಲ್ಲಾ, ನಿಮ್ಮ ತಂಗಿಯ ಜೊತೆಯೇ ಹೊರಟುಹೋಯಿತು." ಎಂದಳು. ಗಂಡನಿಗೆ ಕಣ್ಣೀರು ಒತ್ತರಿಸಿ ಬಂತು. ಏನೂ ಮಾತಾಡಲಿಲ್ಲ. ತಂಗಿಯ ಅಗಲುವಿಕೆಯಿಂದ ರಾತ್ರಿ, ಊಟ, ನಿದ್ರೆಯಿಲ್ಲದೆ ಕೊರಗಿದ.

ಇತ್ತ ಒಂದು ಹೊತ್ತಿನಲ್ಲಿ ತಂಗಿ ಹೊರಳಿ, ಅಣ್ಣಾ....,ಅಣ್ಣಾ , ಎಂದು ಎರಡು ಬಾರಿ ಕೂಗಿದಳು. ಪಕ್ಕದಲ್ಲೆಲ್ಲಾ ತಡಕಾಡಿದಳು. ಕೊರಡು ಇದ್ದುದರಿಂದ ಅಣ್ಣನಿಗೆ ನಿದ್ದೆ ಬಂದಿದೆ ಯೆಂದು ಭಾವಿಸಿ ಮಲಗಿದಳು.

ಬೆಳಿಗ್ಗೆಯಾಯಿತು. ಹಕ್ಕಿಗಳು ಚಿಲಿ ಪಿಲಿ ಗುಟ್ಟಿದವು. ತಂಗಿಗೆ ಕಣ್ಣು ಕಾಣಬಾರದೆಂದು ಸೂಕ್ಷ್ಮವಾಗಿ ಕಣ್ಣಿಗೆ ಒಂದು ಬಟ್ಟೆಯನ್ನು ಕಟ್ಟಿದ್ದ. ತಂಗಿ ಬಟ್ಟೆಯನ್ನು ಬಿಚ್ಚಿದಳು. ನಿರ್ಜರಾಣ್ಯ. ಯಾರೂ ಇಲ್ಲ. ಅಣ್ಣನೂ ಇಲ್ಲ. ಪಕ್ಕದಲ್ಲಿ ಬಿದ್ದಿದ್ದ ಕೊರಡನ್ನು ನೋಡಿ ಊಹಿಸಿದಳು. ಸ್ವಲ್ಪ ಹೊತ್ತಿನಲ್ಲೇ ಪ್ರಜ್ಞೆ ತಪ್ಪಿದಳು. ಎಚ್ಚೆತ್ತ ಬಳಿಕ, ಗೊಳೋ ಎಂದು ಅತ್ತು ಬಿಟ್ಟಳು. ಆದರೆ ಧೃತಿಗೆಡಲಿಲ್ಲ.

ಸರಿ, ಎದ್ದು ಬೇರೆ ದಾರಿ ಹಿಡಿದಳು. ಅಣ್ಣ, ಅತ್ತಿಗೆಗೆ ಒಂದು ಹಿಡಿ ಶಾಪ ಹಾಕಿದಳು ನಾಲ್ಕೈದು ಮೈಲಿಗಳ ದೂರ ಹೋದಮೇಲೆ, ಪಕ್ಕದಲ್ಲಿ ಕೆಲವು ಮನೆಗಳು ಕಂಡು ಬಂದವು. ಹಸಿವು, ಬಾಯರಿಕೆಯಿಂದ ಕಂಗಾಲಾಗಿದ್ದಳು. ಆ ಹಳ್ಳಿಗೆ ಹೊರಟಳು. ನಡೆದು ಬರುತ್ತಾ" ಒಂದು ಮುದುಕಿಯ ಗುಡಿಸಿಲನ್ನು ಕಂಡಳು. ಮುದುಕಿ ಅಂಗಳದಲ್ಲಿ ಚಾಪೆ ಹೆಣೆಯುತ್ತಾ ಕುಳಿತಿತ್ತು.

ಬಳಲಿ, ಬೆಂಡಾಗಿದ್ದ ಹುಡಗಿಯನ್ನು ನೋಡಿ 'ಬಾರಮ್ಮ ಯಾರು ನೀನು? ಎಂದು ಮುದುಕಿ ವಿಚಾರಿಸಿದಳು. ಅದಕ್ಕೆ ಆ ಹುಡಗಿ ನಡೆದ ಕತೆಯನ್ನೆಲ್ಲಾ ಹೇಳಿದಳು. ಅಜ್ಜಿ ದುಃಖಗೊಂಡು, ಈ ದಿನ ಇಲ್ಲೇ ಊಟ ಮಾಡಿ ಮಲಗು' ಎಷ್ಟಾದರೂ ಮುದಕಿಯಲ್ಲವೇ ತಂಗಿಯ ದುಃಖ ಈಉಪಚಾರದಿಂದ ಸ್ವಲ್ಪ ಮರೆಯಾಯಿತು.

ಬಳಿಕ ಅಜ್ಜಿ, ಆ ಹುಡಗಿಯ್ನ ಹತ್ತಿರ ಕರೆದು ತಂಗೀ" ನೋಡು ಈ ಊರಲ್ಲೊಂದು ದೊಡ್ಡ ಗಾಜಿನ ಕಂಬ ಇದೆ ಅದು ಅತ್ಯಂತ ಪವಿತ್ರವಾದುದು. ಯಾರು ಶ್ರದ್ಧೆ, ಭಕ್ತಿಯಿಂದ ಪೂಜೆ ಮಾಡುತ್ತಾರೋ. ಅಂತಹವರಿಗೆ ಮಾತ್ರ ಆ ಕಂಬ ಬಾಯಿ ಬಿಡುತ್ತದೆ. ನಿನ್ನ ಅದೃಷ್ಟ ಇದ್ದರೆ ಅದು ಬಾಯಿ ಬಿಡುತ್ತದೆ. ಒಳಗೆ ಹೋಗು, ಒಂದು ಅರಮನೆ ಕಾಣುತ್ತದೆ ಹಣ್ಣು, ಹಂಪಲುಗಳು ಬೇಕಾದಷ್ಟು ಬೆಳೆದಿರುತ್ತದೆ. ಪಕ್ಕದ ಒಂದು ಚಿಕ್ಕ ರೂಮಿನಲ್ಲಿ ಒಂದು ದೇವರ ಮನೆಯಿದೆ. ದಿನಾಲೂ ನೀನು ಮುಂಜಾನೆ ಎದ್ದು, ಹೂವನ್ನು ಕುಯ್ದು ದೇವರನ್ನು ಅರ್ಚಿಸು. ನೀನು ಹಣ್ಣು, ಹಂಪಲಗಳನ್ನು ತಿಂದುಕೊಂಡು ಇರು", ಎಂದು ಹೇಳಿತು.

ಅಜ್ಜಿ ಹೇಳಿದ ಮಾತನೆಲ್ಲಾ ನೆನಪಿನಲ್ಲಿಟ್ಟುಕೊಂಡು, ಮುಂಜಾನೆ ಎದ್ದು, ಸ್ನಾನ ಮಾಡಿ, ಅಜ್ಜಿಗೆ

ನಮಸ್ಕರಿಸಿ, ಗಾಜಿನ ಕಂಬದ ಹತ್ತಿರ ಹೋದಳು. ಅನನ್ಯ ಭಕ್ತಿಯಿಂದ ಪ್ರಾರ್ಥಿಸಿದಳು. ತಕ್ಷಣ ಗಾಜಿನ ಕಂಭ ಇಬ್ಭಾಗವಾಗಿ, ದಾರಿ ಮಾಡಿಕೊಟ್ಟಿತು. ತಂಗಿ ಒಳಕ್ಕೆ ಹೋದಳು. ಗಾಜಿನ ಕಂಬ ತಕ್ಷಣ ಮುಚ್ಚಿತು! ಅವಳಿಗೆ ಅಜ್ಜಿ ಹೇಳಿದ ಮಾತೆಲ್ಲಾ ನಿಜವೆನಿಸಿತು. ಅಜ್ಜಿ ಹೇಳಿದ ರೀತಿ, ಮುಂಜಾನೆ ಎದ್ದು, ಸ್ನಾನ ಮಾಡಿ ದೇವರಿಗೆ ಪೂಜೆ ಮಾಡಿ, ಹಣ್ಣು, ಹಂಪಲುಗಳನ್ನು ತಿಂದು, ಕಾಲ ಕಳೆಯುತ್ತಿದ್ದಳು.

ಹೀಗೆ ಎಂಟು-ಹತ್ತು ದಿನಗಳು ಕಳೆದವು. ಅಲ್ಲಿದ್ದ ರಾಜಕುಮಾರನಿಗೆ ಆಶ್ಚರ್ಯವಾಯಿತು. ಯಾರು ಬಂದು ಇಷ್ಟೊಂದು ಹಣ್ಣುಹಂಪಲುಗಳನ್ನು ಕೀಳುತ್ತಾರೆ; ಎಂದು ಸಂಶಯ ಬಂದು, ಒಂದು ದಿನ ಬೆಳಗಿನ ಝಾವ ಗಿಡದ ಮರೆಯಲ್ಲಿ ರಾಜಕುಮಾರ ಕುಳಿತು ವೀಕ್ಷಿಸಿದನು. ತಕ್ಷಣ ರಾಜಕುಮಾರ ಹೂ ಕೀಳುತ್ತಿದ್ದ ಅವಳ ಕೈಯನ್ನು ಹಿಡಿದು, ಯಾರು ನೀನು? ಏಕೆ ಇಲ್ಲಿಗೆ ಬಂದೆ? ಎಂದು ಕೇಳಿದನು.

ನಡೆದ ವೃತ್ತಾಂತವನ್ನೆಲ್ಲಾ ತಂಗಿ' ನಿಸ್ಸಂಕೋಚವಾಗಿ ವಿವರಿಸಿದಳು. ರಾಜಕುಮಾರನ ಕಣ್ಣಲ್ಲೂ ನೀರು ಹನಿಯಿತು.

ಬೆಳಕು ಹರಿಯಿತು. ರಾಜಕುಮಾರ ಇವಳನ್ನು ಕರೆದು ಕೊಂಡು, ತನ್ನ ತಂದೆಯ ಮುಂದೆ ನಿಲ್ಲಿಸಿ, 'ನಾನು ಇವಳನ್ನು ಮದುವೆಯಾಗುತ್ತೇನೆ', ಎಂದ. ರಾಜಕುಮಾರನ ತಂದೆ ಎಲ್ಲಾ ವಿಚಾರವನ್ನು ತಿಳಿದು, ಮದುವೆಗೆ ಒಪ್ಪಿಗೆ ಕೊಟ್ಟ. ತಂಗಿ, ನಾಚಿಕೆಯಿಂದ ಪರಿಚಯವಿಲ್ಲದ, ಈ ಲೋಕದಲ್ಲಿ ಈ ಸುಖಬಿಟ್ಟರೆ ಇನ್ನೆಲ್ಲಿ?- ಎಂದು ಮದುವೆಗೆ ಸಮ್ಮತಿಸಿದಳು. ಮತ್ತೊಮ್ಮೆ ಅಣ್ಣ ಜ್ಞಾಪಕ ಬಂದು, ಅತ್ತಳು.

ಮರದಿನ ವಿಜೃಂಭಣೆಯಿಂದ ಮದುವೆಯಾಯಿತು. ರಾಜಕುಮಾರ ಪಟ್ಟವೇರಿದ. ಇವಳು ಪಟ್ಟದರಿಸಿಯಾದಳು. ಇವರು ಸುಖ-ಸಂತೋಷದಿಂದ ಬಹುಕಾಲ ಬಾಳಿದರು.

[ಕಥೆ ಹೇಳಿದವರು : ಶ್ರೀಮತಿ ಯಶೋದಮ್ಮ ಮಾದನಹಳ್ಳಿ]

## ಮಹಾತ್ಮರ ನೆನಪುಗಳು-೬

### ಮಕ್ಕಳಲ್ಲಿ 'ಮಗು'

-ಪ. ರಾಮಕೃಷ್ಣಶಾಸ್ತ್ರಿ

ಮಕ್ಕಳ ಒಡನಾಟದಲ್ಲಿ ಬಾಪೂ ಕೂಡ ಮಗುವಿನಂತಾಗುತ್ತಿದ್ದರು. ಅವರ ಪ್ರೀತಿಯಲ್ಲಿ ಮೊಮ್ಮಗಳು ಕೂಡ ಸುಮಿತ್ರಾಭಾಗಿಯಾಗಿದ್ದಳು. ಸುಮಿತ್ರಾ ಐದುವರ್ಷದವಳಿದ್ದಾಗ ಅವಳ ಗುಂಗುರು ಕೂದಲುಗಳನ್ನು ತಾಯಿ ಎಷ್ಟು ಹಿಂದಕ್ಕೆ ಕಟ್ಟಿದರೂ ಮುಖಕ್ಕೆ ಬಂದು ಬೀಳುತ್ತಿತು. ಅದರಿಂದ ಕಣ್ಣಿಗೆ ತೊಂದರೆಯಾಗತೊಡಗಿತು. ಆಗ ತಂದೆ ರಾಮದಾಸಗಾಂಧಿ ಮತ್ತು ತಾಯಿ ಆ ಕೂದಲುಗಳನ್ನು ಕತ್ತರಿಸಿ ಬಿಡಬೇಕೆಂದು ಆಶಿಸಿದರು. ಆದರೆ ಸುಂದರವಾದ ಕೂದಲನ್ನು ಕತ್ತರಿಸಿ ಬಾಬ್ ಮಾಡಿಕೊಳ್ಳಲು ಸುಮಿತ್ರಾ ಒಪ್ಪಲೇಇಲ್ಲ.

ದೀಪಾವಳಿಯ ಮರುದಿನ ಗುಜರಾಥಿ ಯುಗಾದಿ ಅಂದು ಚಿಕ್ಕವರೆಲ್ಲ ಹಿರಿಯರಿಗೆ ನಮಸ್ಕರಿಸಿ ಆಶೀರ್ವಾದ ಬೇಡುವುದು ವಾಡಕೆ. ಸುಮಿತ್ರಾ ತಟ್ಟೆಯಲ್ಲಿ ಸಿಹಿತಿಂಡಿ ತುಂಬಿಸಿ ಬಾಪೂವಿನೆಡೆಗೆ ಆಶೀರ್ವಾದ ಬೇಡಲು ಹೋದಳು. ಬಾಪೂ ಸಿಹಿತಿಂಡಿ ಸ್ವೀಕರಿಸದೆ, "ನಾನು ತಿನ್ನಬೇಕಾದರೆ ನನಗೆ ನೀನು ಕೇಳಿದ್ದನ್ನು ಕೊಡಬೇಕು" ಎಂದು ಷರತ ಒಡ್ಡಿದರು. ಹುಡುಗಿ ಹುಮ್ಮಸ್ಸಿನಿಂದ ಒಪ್ಪಿಬಿಟ್ಟಳು.

" ಹಾಗಿದ್ದರೆ ನಿನ್ನ ತಲೆಕೂದಲನ್ನು ಕೊಡು " ಎಂದರು ಬಾಪೂ. ಸುಮಿತ್ರಾಗೇ ಮಾತೇ ಬರಲಿಲ್ಲ; ಅವಳು ಉಪಾಯ ಹೂಡಿ, " ನೀವೇ ಕತ್ತರಿಸಿದರೆ ಮಾತ್ರಾ ಕೊಡುತ್ತೇನೆ" ಎಂದಳು. ಗಾಂಧೀಜಿ ಅದಕ್ಕೆ ಒಪ್ಪಿದರು. ಕತ್ತರಿ ಕೂಡಲೇ ತರಿಸಿ, ಸುಮಿತ್ರಾಳಿಗೆ ಬಾಬ್ ಮಾಡಿಯೇ ಬಿಟ್ಟರು!

ಶ್ರೀ ರಾಮಕೃಷ್ಣ ಬಜಾಜರಿಗೆ ಅಂಚೆಚೀಟಿ ಸಂಗ್ರಹಿಸುವ ಹವ್ಯಾಸವಿತ್ತು. ಅದು ಗಾಂಧೀಜಿಗೂ ತಿಳಿದಿತ್ತು. ಒಮ್ಮೆ ಬಜಾಜರು ಅವರನ್ನು ಭೆಟ್ಟಿಯಾದಾಗ, "ನಿನಗಾಗಿ ಹತ್ತು ತಿಂಗಳಿನಿಂದ ಎರಡು ಅಂಚೆಚೀಟಿಗಳನ್ನು ಕಾದಿರಿಸಿದ್ದೇನೆ" ಎಂದು ಹೇಳಿ ತಮ್ಮ ಕಾರ್ಯದರ್ಶಿಗೆ ಅವನ್ನ ಹುಡುಕಿ ಕೊಡಲು ಹೇಳಿದರು. ಆದರೆ ಅವನ್ನು ಎಲ್ಲಿಟ್ಟಿದ್ದಾರೆಂದು ನೆನಪಿಲ್ಲವಾದುದರಿಂದ ಸಿಗಲಿಲ್ಲ.

ಆದರೆಗಾಂಧೀಜಿ ಕೆಲವು ನಿಮಿಷಗಳ ಕಾಲ ಹುಡುಕಿ ತಮ್ಮ ನೂರಾರು ಫೈಲುಗಳ ನಡುವಿಂದ ಕಾಗದದ ಪಾಕೀಟೊಂದನ್ನು ಹೊರಗೆ ತೆಗೆದರು. ಅದರಲ್ಲಿ ಸ್ಟಾಂಪುಗಳಿದ್ದವು !





# ಭಾರತದ ಸುಪವಿತ್ರ ನದಿ-ಗಂಗಾ

( ಒಂದು ಪಕ್ಷಿ ನೋಟ )

—ಎಸ್. ಎಸ್. ಗದಗಕರ

ಹಿಂದೂಗಳಿಗೆ ಗಂಗಾನದಿಯ ಬಗ್ಗೆ ಪವಿತ್ರ ಪೂಜ್ಯ ಭಾವನೆ ರಕ್ತಗತವಾಗಿ ಬಂದಿದೆ. ಅದು ಪುರಾಣದಲ್ಲಿ ಅಘನಾಶೀ, ಜಾಹ್ನವೀ, ಭಾಗೀರಥೀ -ಮುಂತಾದ ನಾಮಾಂತರಗಳಿಂದ ಉಲ್ಲಿಖಿತವಾಗಿದೆ. ಆದರೆ ಅದು ಪೌರಾಣಿಕವಾಗಿ ಎಷ್ಟು ಪವಿತ್ರವೋ ವೈಜ್ಞಾನಿಕವಾಗಿಯೂ ಅಷ್ಟೇ ಉಪಯೋಗಿ ಅದನ್ನು ಮಾನ್ಯ ಲೇಖಕರು ರಘುವೀರಸಿಂಹರ 'Sacred River of India' ಎಂಬ ಗ್ರಂಥದಆಧಾರದಿಂದ ಇಲ್ಲಿ ವಿವರಿಸಿದ್ದಾರೆ.

ಗಂಗಾ ನದಿಗೆ ಅನೇಕ ಹೆಸರುಗಳುಂಟು. ಕೆಲವರು ನೂರಾಎಂಟು ಎಂದರೆ, ಬೇರೆ ಹಲವರು ಸಾವಿರ ಅನ್ನುವರು. ಆದರೆ ಕ್ಷೀರ ಶುಭ್ರ, ಭೀತಿ ಹಾರಿ, ಸಂಸಾರ ನಾಶಿನಿ, ಶುಭಾಂಗಿ-ತೀರ ಕೆಲವು ಮಾತ್ರ.

ಉಗಮದಿಂದ ಸಾಗರದವರೆಗೆ ಗಂಗಾನದಿ ೧೫೬೦ ಮೈಲಿ ಇರುವುದು. ನೈಲ್‌ನದಿ ಇದರ ಎರಡರಷ್ಟು ಉದ್ದ. ಮಿಸಿಸಿಪಿ, ಮಿಸೂರಿ, ಯಾಂಗತ್ಸೆ ನದಿಗಳೂ ಅಷ್ಟೆ.

ಶ್ರೀ ರಘುವೀರ ಸಿಂಹರ ಅಭಿಪ್ರಾಯದ ಮೇರೆಗೆ, ಗಂಗಾನದಿಗೆ ಇಂತಹ ಅಪಾರ ಘನತೆ ಉಂಟಾಗಿರಲು ಕಾರಣ ವೆಂದರೆ, ಲಕ್ಷಗಟ್ಲೆ ಹಿಂದೂ ಬಾಂಧವರಿಗೆ ಅದು ತಾಯಿಯೋಪಾದಿ ಆಗಿರುವುದು.

ಆ ನದಿಯ ನಾಮೋಚ್ಚಾರಣೆಯಿಂದಲೇ ಪಾಪ ನಾಶವಂತೆ. ಅಲ್ಲಿ ಸ್ನಾನಗೈದಾಗ ಪಾಪಕ್ಷಾಲನೆ ಖಂಡಿತ. ಅಲ್ಲಿ ಮೃತ ಪಟ್ಟವರಿಗಂತೂ ಸ್ವರ್ಗ ಖಚಿತ. ಅಲ್ಲಿಯ ನೀರಿನ ಗುಣ ಕಂಡು ಕಲಶಗಳಲ್ಲಿ ಅದನ್ನು ತುಂಬಿಕೊಂಡು ಒಯ್ಯುವರು. ವರ್ಷದುದ್ದಕ್ಕೂ ಅದು ಶುಚಿಯಾಗಿ ಉಳಿಯುವುದು. ಕ್ರಿಮಿನಾಶಕ ಗುಣಕ್ಕಾಗಿ ಅದು ಸುವಿಖ್ಯಾತ.

**ಉಗಮ :**

ಹಿಮಾಲಯದಲ್ಲಿ ೧೩,೦೦೦ ಅಡಿ ಎತ್ತರದ ಗೋಮುಖದಲ್ಲಿ ಅದು ಹುಟ್ಟಿ "ಭಾಗೀರಥಿ" ಎಂದು ಅಭಿದಾನ ಪಡೆದಿರುವುದು. ಆ ಗಂಗೋತ್ರಿ ಹಿಮಪ್ರವಾಹವು ಎಲ್ಲ ಜಾತಿಯವರಿಗೂ ಪಾವನಮಯ. ಸ್ವಾಮಿ ಶಾರದಾನಂದರು ಆ ಪ್ರಶಾಂತ ಪ್ರದೇಶಕ್ಕೆ ಮಾರುಹೋಗಿ ಅಲ್ಲಿಯ ಗವಿಯಲ್ಲಿ ಹದಿನಾರು ವರ್ಷಗಳ ಕಾಲ ವಾಸಿಸಿದರು.

ಪುರಾಣಗಳ ಪ್ರವಾದದ ಮೇರೆಗೆ, ಸಗರ ರಾಜನ ವಂಶದ ಭಗೀರಥನು ಹಿಮವತ್ ರಾಜನ ಮಗಳಾದ ಗಂಗಾದೇವಿಯನ್ನು ಸ್ವರ್ಗಗಿಂದ ಕರೆತಂದನು. ಆ ಮೂಲಕ ದೊರೆಯ ೬೦,೦೦೦ ಮಕ್ಕಳು ಶಾಪವಿಮೋಚನೆ ಪಡೆದರು. ಹೀಗೆ ಭಾಗೀರಥಿ ಎಂಬ ಹೆಸರು ಗಂಗಾನದಿಗೆ ಬಂದಿತು.

ಆ ನದಿಯ ರಭಸವನ್ನು ಭೂಮಿ ಸಹಿಸದೆಂದು ಪರಿಗ್ರಹಿಸಿ ಶಿವನು -ತನ್ನ ಉಂಗುರಗೂದಲಗಳಲ್ಲಿ ಆದಕ್ಕೆ ಆಶ್ರಯವಿತ್ತನು. ಅಂತೇ ಗಂಗಾಧರ ಎಂಬ ಹೆಸರಿಗೆ ಔಚಿತ್ಯ. ಮುಂದೆ ಆ ಗಂಗಾನದಿ ಏಳು ಟಿಶಿಲುಗಳಲ್ಲಿ (ಸಪ್ತಸಿಂಧು) ಹರಿಯಿತು. ಶ್ರೀ ವಿಷ್ಣುವಿನ ವಾಮ ಪಾದಾಂಗುಟದಿಂದ ಈ ನದಿ ಹೊರಹೊಮ್ಮಿತೆಂದು ವೈಷ್ಣವರ ಕಲ್ಪನೆ.

ಗಂಗೋತ್ರಿಯ ಯಾತ್ರೆ ಕೈಗೊಳ್ಳುವವರು ಪಶ್ಚಿಮದಿಂದ ಪೂರ್ವಕ್ಕೆ ಕ್ರಮಿಸುವರು. ಮೊದಲು ಯಮುನಾ ಉಗಮಕ್ಕೆ ಹೋಗುವರು (೨೦,೭೨೦,೨೦,೦೨೦ ಅಡಿ ಎತ್ತರ ಶಿಖರಗಳ ನಡುವಿನಿಂದ). ಅಗರ ಬತ್ತಿ, ಧೂಪ, ತುಪ್ಪ, ಶ್ರೀಗಂಧ, ಅಡುಗೆಯ ಸರಂಜಾಮು -ಎಲ್ಲ ಹೊತ್ತುಕೊಂಡು ಕಾಲು ನಡಿಗೆಯಿಂದಲೆ ಕೆಲವರು ಜಮ್ನೋತ್ರಿ ಸಂದರ್ಶಿಸುವರು. ಕೆಲವರಂತೂ ದಾರಿ

ಯಲ್ಲಿಯೇ ಪ್ರದಕ್ಷಿಣೆ, ನಮಸ್ಕಾರ ಸಲ್ಲಿಸುತ್ತಾ ಸಾಗುವರು.

ದೇವದಾರು ವೃಕ್ಷಗಳ ಸಮೂಹದಲ್ಲಿ ಗಂಗೋತ್ರಿಯ ಬಳಿ ಚಿಕ್ಕದೇವಾಲಯ ಇರುವುದು. ಅದರ ಶಿಖರದಲ್ಲಿ ಕೆಂಪು ಧ್ವಜ ಸದೈವ ಫಡಫಡಿಸುತ್ತಿರುವುದು. ಅಲ್ಲಿಯೇ ಗಂಗಾ, ಭಾಗೀರಥಿ ಪ್ರತಿಮೆಗಳಿರುವವು. ಅಲ್ಲಿಂದಲೇ ಭಾಗೀರಥಿ ಕಿರುನದಿ. ಸಾಗರಕ್ಕೆ ಕೊಡುವುದು ಮೇಲೆ ಆಗಸವು ಕಪ್ಪು ಮೋಡಗಳಿಂದ ಆವೃತವಾಗಿರುವುದು.

ಗಂಗೋತ್ರಿಯಿಂದ ನೂರು ಮೈಲಿ ದೂರದಲ್ಲಿ ಕೇದಾರನಾಥ ಇರುವುದು. ಅದು ಇನ್ನೊಂದು ಪವಿತ್ರ ನದಿ ಮಂದಾಕಿನಿಯ ಉಗಮಸ್ಥಳ. ಕೇದಾರನಾಥೇಶ್ವರ ದೇವಸ್ಥಾನದಲ್ಲಿ ಒಂಬತ್ತನೆಯ ಖ್ಯಾತ ಶಿವಲಿಂಗ ಪ್ರತಿಷ್ಠಾಪಿತವಾಗಿದೆ.

ನೂರಾಐದು ಮೈಲಿ ಮೋಟಾರ್ ಪ್ರವಾಸದ ನಂತರ ಯಾತ್ರಿಕರು ಬದ್ರಿನಾಥ, ಅಲಕಾನಂದ ನದಿಗೆ ಬರುವರು. ಜೈ ಬದ್ರಿ, ವಿಶೋಲಲಾಲಕಿ ಜೈ ಎಂದು ಶ್ರೀ ವಿಷ್ಣುವಿನ ಜಯ ಜಯಕಾರ ಮಾಡುತ್ತ ನಡೆದ ಭಕ್ತಗಡದ ದೃಶ್ಯ ಕಣ್ಣಿಗೆ ಚಿರಂತನ ಹಬ್ಬ.

ನಂದಾದೇವಿ ಶಿಖರದಿಂದ (೨೫೬೪೫ ಅಡಿ) ಸಮುದ್ಭವಿಸಿದ ಋಷಿ ಗಂಗಾ ನದಿ ಧವಳಗಂಗೆಯನ್ನು ಕೂಡುವುದು. ಅವೆರಡು ಅನಂತರ ಜೋಶಿ ಮಠದ ಬಳಿ ಅಲಕಾನಂದಕ್ಕೆ ಬರುವವು. ಅಲಕಾನಂದವು ದೇವ ಪ್ರಯಾಗದ ಬಳಿ ಭಾಗೀರಥಿಗೆ ಕೂಡಿ ಗಂಗಾ ಎಂದು ಕರೆಯಲಾಗುವುದು.

ಹರಿದ್ವಾರದ ಬಳಿ ಗಂಗಾ ಬಯಲು ಪ್ರದೇಶಕ್ಕೆ ಬರುವದು. ಇಲ್ಲಿಂದ ಅನೇಕ ಕಾಲುವೆಗಳನ್ನು ತೆಗೆದಿರುವರು. ಗಂಗಾ ಯಮುನಾ ನದಿಗಳ ಸಂಗಮ ಪ್ರದೇಶ ಬಹಳ ಫಲವತ್ತಾದುದು. ನೌಕಾ ವಿಹಾರಕ್ಕೆ ಅಷ್ಟು ಯೋಗ್ಯವಲ್ಲ.

(ಹರಹರಿ)ದ್ವಾರದ ಕ್ಷೇತ್ರವು ಭಾರತೀಯರಿಗೆ ಪರಮ ಪೂಜನೀಯ. ಏಳು ಕ್ಷೇತ್ರಗಳಲ್ಲಿ ಇದೊಂದು. ಉಳಿದ ಆರು ಎಂದರೆ ಮಥುರಾ, ವಾರಣಾಸಿ, ಕಾಂಚಿಪುರಂ, ಉಜ್ಜಯನಿ, ಅಯೋಧ್ಯಾ, ದ್ವಾರಕಾ.

ಹರಿದ್ವಾರ ನಗರದ ಮಧ್ಯ ಭಾಗದಲ್ಲಿ ದುರ್ಗಾದೇವಿಯ ಚಿಕ್ಕ ಮಂದಿರ ನೆಲಸಿರುವುದು. ಅಲ್ಲಿಂದ ನಾವು ಕೆಳಗೆ ಹರಿಯುವ ನದಿಯ ಅಂಕು ಡೊಂಕು, ಗತಿಯನ್ನು ಗಮನಿಸಬಹುದು. ಹರಿದ್ವಾರ ನಗರ ಅಷ್ಟೇನು ಭವ್ಯವಿಲ್ಲ. ಜಾಹಿರಾತಿನ ಹಾವಳಿ ಅದನ್ನು ಅಲ್ಲಲ್ಲಿ ಸಾಕಷ್ಟು ವಿರೂಪಗೊಳಿಸಿದೆ. ಗಂಗಾನದಿಯ ಹುಟ್ಟು ಹಬ್ಬವಾದ ವೈಶಾಖದ ಮೊದಲು ದಿನದಂದು ಅಲ್ಲಿಯ ಘಾಟಿನಲ್ಲಿ ಉಲುವು ಬಹಳ. ಹನ್ನೆರಡು ವರ್ಷಕ್ಕೊಮ್ಮೆ ಹೊರಡುವ ಕುಂಭ ಮೇಳದ ದಿನವಂತೂ ಜನಜಂಗುಳಿ ವಿಶೇಷ. ೧೯೬೨ ರಲ್ಲಿ ನಡೆದ ಕುಂಬ ಮೇಳದ ದಿನ ಎರಡು ಲಕ್ಷ ಜನರು ಘಾಟಿನಲ್ಲಿ ಸ್ನಾನ ಮಾಡಿದರು.

**ಪಂಡಾ ವ್ಯಾಪಾರ :**

ಹರಿದ್ವಾರ ಕಂಡು ಬೇಜಾರ ತಲೆದೋರಲು ಕಾರಣ ಎಂದರೆ, ಆ ಪಂಡಾ ಜನರ ಹಾವಳಿ ಅವರದು ವಿಶಿಷ್ಟ ವ್ಯಾಪಾರಿ ಮನೋವೃತ್ತಿ. ಕಾರ್ಡು ಪದ್ಧತಿಯನ್ನು ಯೋಚಿಸಿ ಯಾತ್ರಿಕರ ಪೂರ್ವ ವೃತ್ತಾಂತ ಅರುಹಿ ಬಲಿ ಕೆಡವಿಕೊಳ್ಳುವರು. ಜಾತಿ ಊರು ಹೇಳಿದರೆ ಸಾಕು. ಆ ಪಾಂಡ ಪುರೋಹಿತ ವರ್ಗವ್ಯಕ್ತಿಯ ಸಮಗ್ರ ಇತಿಹಾಸ ಉಸುರುವದು. ಹೆಬ್ಬೊತ್ತಿಗೆಗಳಲ್ಲಿ ಬರು ಹೋಗುವವರ ವಿವರ ಸಿಗುವವು. ಧರ್ಮಿಷ್ಠರು. ಇವರ ಸಲಹೆಯಂತೆ ನಡೆದುಕೊಂಡು ಪಾವನರಾಗುವರು.... "ಜಂಬುದ್ವೀಪೇ, ಭಾರತವರ್ಷೇ, ಉತ್ತರಖಂಡೇ, ಪವಿತ್ರ ಗಂಗಾತೀರೇ"...ಎಂದು ಮಂತ್ರ ಉಚ್ಛರಣೆ ನಡೆಯುವದು.

**ಖದಿರ ಹಾಗೂ ಭಬರ :**

ಹರಿದ್ವಾರದಿಂದ ಸುಮಾರು ನೂರು ಮೈಲುಗಳವರೆಗೆ ಗಂಗಾ ನದಿ ಏಕಾಂತ ಪ್ರದೇಶದಲ್ಲಿ ಹರಿಯುವದು. ಬಲಬದಿಗೆ ಖದಿರ ಎಂಬ ಹುಲ್ಲುಗಾವಲು ಪ್ರದೇಶ ಹರಡಿ ಹಿಮಾಲಯದ ಗರ್ವಾಲದವರೆಗೆ ಮುಚ್ಚಿರುವದು. ಆ ಮೇಲೆ ಭಬರ ಎಂಬ ಕಲ್ಲು ಬಂಡೆ ಮಿಶ್ರಿತದೊಳ ಪ್ರದೇಶದೊಳಗಿಂದ ನದಿ ಹಾಯ್ದು ಹೋಗುವದು. ಮುಂದೆ ಮೈಲು ಹರಿಯುವಾಗ ನೌಕಾ ಕ್ರೀಡನಕ್ಕೆ ಅನುಕೂಲತೆ ಆಗುವದು. ಮತ್ತೆ ಕ್ರಮಿಸಿದಂತೆ ನೀರ ಪಾತಳಿ ಕಡಿಮೆ ಆಗುತ್ತ ನಡೆದು ಡಿಸೆಂಬರದಲ್ಲಿ ತೀರ ಬತ್ತಿ ಹೋಗುವದು.



ಈಗ ಬದಿಯಲ್ಲಿ ಹಳ್ಳಿಗಳೂ ಕಡಿಮೆ. ಸಾಧೂ ಜನರು ವಿರಳ. ಈ ಕ್ಷೇತ್ರಗಳಲ್ಲಿ ಕಾಡುಪ್ರಾಣಿಗಳ ಕಾಟ ಹೆಚ್ಚು. ವಿಧ ವಿಧ ಬಗೆಯ ಧಾನ್ಯಗಳು –ಎಳ್ಳು, ಜೋಳ, ಗೋಧಿ, ಅಕ್ಕಿ, ಗೋವಿನಜೋಳ, ತಂಬಾಕು ಕೂಡ ಬೆಳೆಯುವುದು. ತೀರ ಪ್ರದೇಶ ಅಷ್ಟು ಫಲವತ್ತಾದುದು.

ಇಲ್ಲಿಯ ಹಳ್ಳಿಗಳು ಮಾದರಿ ಎನ್ನಬೇಕು. ಮನೆಗಳು ಗುಡಿಸಲೋಪಾದಿ ಇರುವವು. ಬಹುತರವಾಗಿ ಜನರು ನಾಯಿ ಸಾಕುವರು. ಅವುಗಳ ಸ್ವರೂಪ ಉಗ್ರ ಶಿಶಮ್ ಗಿಡಗಳಲ್ಲಿ ರಣಹದ್ದುಗಳಿರವವು.

**ಬೇಸಿಗೆಯ ತಾಪ :**

ಜನವರಿಯಲ್ಲಿ ಚಳಿಗಾಲದ ಮಳೆ ಆಯಿತೆಂದರೆ ಬೇಸಿಗೆ ಆರಂಭ. ಗುಡುಗು ಸಿಡಲಿನ ಮಳೆ ಆದಾಗಲೇ ನೆಲ ತಂಪು. ಮಾನ್ಸೂನ್ ಅಡಿ ಇಟ್ಟಿತೆಂದರೆ ಮಹಾಪೂರಕ್ಕೆ ಮೊದಲು.

ನದಿಯ ಪಾತಳಿಯಲ್ಲಿ ಪರಿವರ್ತನೆ ಆದಂತೆ ಮೇಲಿನ ನಗರಗಳೂ ಬಣ್ಣ ಬದಲಿಸುವವು. ಕುಲಕುಲು ನಗುವ ಪಟ್ಟಣಗಳು ಮಹಾಪೂರಕ್ಕೆ ತುತ್ತಾಗಿ ನಶಿಸಿದುದುಂಟು. ಯಾವಾಗ ನದಿ ತೀರ ಕುಸಿದೀತೂ ಜನರಿಗೆ ಲೆಕ್ಕ ಹತ್ತದು. ಅಂತೇ ವಾಸಿಸಲು ಗುಡಿಸಲುಗಳೇ ಗತಿ ಎನಿಸಿವೆ ಜನಕ್ಕೆ!

**ಸ್ಮೃತಿಪಥದಿಂದ ಜಾರಿದ ಪ್ರವಾಹಗಳು :**

ನದೀ ತೀರದಗುಂಟ ಹೆಂಗಳೆಯರು ಬಟ್ಟೆ ಒಗೆಯುವರು, ಆಗೀಗ ಸ್ನಾನ ಕೂಡ ನಡೆದಿರುವದು. ಅಲ್ಲೊಂದು ಇಲ್ಲೊಂದು ಹಾಳು ಬಿದ್ದ ಮೊಗಲ ಅರಮನೆಗಳು ದೃಗ್ಗೋಚರವಾಗುವತ್ತ, ದೇವಾಲಯಗಳಲ್ಲಿ ಶಿವಲಿಂಗದ ಪೂಜೆ ಯಥಾವಿಧಿ ನಡೆದಿರುವದು "ರಾಮ ನಾಮ ಸತ್ ಹೈ" ಎಂಬ ಭಕ್ತರ ಜಯ ಜಯಕಾರ ಪಾಂಥಸ್ಥರ ಕಿವಿ ಗಡಚಿಕ್ಕಿಸುವದು. ಉತ್ತರಪ್ರದೇಶದ ಕಬ್ಬು, ಔಡಲ, ಗೋದಿ ಪೈರಿನ ನಟ್ಟ ನಡುವೆ ಕೆಂಪು ಕಲ್ಲಿನ ದೇವಾಲಯ. ಕ್ಷೇತ್ರ ಶಿಲೆಯ ಮನೇದೆ ಚಿತ್ರ ವಿಚಿತ್ರ ಬಣ್ಣದ ಅರಮನೆಗಳು ಕಣ್ಣಿಗೆ ಬೀಳುವವು. ಸುತ್ತಲೆಲ್ಲ ಪಚ್ಚ ಪಸಿರು ಮುರಿಯುವ ಬೆಳೆ!

ಈಗ ನಾವಿಕರು, ಮೀನುಗಾರರು, ನದೀ ತೀರ ಮುತ್ತವರು ಪ್ರವಾಹದಲ್ಲಿ ಬೃಹದಾಕಾರದ ಮೊಸಳೆಗಳು ಸಾಲು ಸಾಲಾಗಿ ಸಾಗಿರುವದು ಕಾಣುವುದು. ಬಾತ ಕೋಳಿ, ರಾಜಹಂಸದ ಹಿಂಡೂ ಕಣ್ಣಿಗೆ ಚಿರಾನೂತನಹಬ್ಬ.

**ಆತ್ಮ ಹತ್ಯೆ :**

ಅಲಹಾಬಾದದ ಬಳಿಯ ಗಂಗಾನದಿಗೆ ಪೂಜ್ಯತೆ ಹೊರಸೂಸುವುದು. ಗಂಗಾ, ಯಮುನಾ, ಸರಸ್ವತಿ –ಸಂಗಮ ಶುದ್ಧ ಪ್ರಯಾಗ. ಇಲ್ಲಿ ಬ್ರಹ್ಮನು ದಶಾಶ್ವಮೇಧ ಮಾಡಿದನೆಂದು ಪ್ರತೀತಿಯುಂಟು, ಅಂದಿನಿಂದ ಇಲ್ಲಿ ಯಜ್ಞ ಯಾಗಗಳು ಅವ್ಯಾಹತವಾಗಿ ನಡೆಯುತ್ತ ಬಂದಿವೆ. ಪ್ರಯಾಗದಲ್ಲಿ ಮರಣವಾದರೂ ಮಹತ್ ಪುಣ್ಯ ಎಂಬ ಕಲ್ಪನೆ ಪ್ರರೂಢವಾಗಿರುವದು ಅದು ಸಹಜವೇನಲ್ಲ! ಹಾಗೆಯೇ ಇಲ್ಲಿಯ ಆತ್ಮಹತ್ಯೆಗೂ ವಿಶೇಷ ಗುಣ ಉಂಟು! ಅಸಂಖ್ಯಾತ ರಾಜರುಗಳು, ಸನ್ಯಾಸಿಗಳು, ಯಾತ್ರಿಕರೂ ಬೇಕೆಂತಲೆ ಇಲ್ಲಿ ಆತ್ಮಘಾತ ಮಾಡಿಕೊಂಡರು. ವೇದಾಂತ ಜ್ಞಾನಿ ಕುಮಾರಿಲ ಭಟ್ಟ ಎಂಬುವನು ಇಲ್ಲಿಯದೊಂದು ಮಹಾವಟವೃಕ್ಷ ಏರಿ ಅದರ ತುಟ್ಟತುದಿಯ ರೆಂಬೆಯಿಂದ ಹಾರಿ ಜನ್ಮ ನೀಗಿದನಂತೆ! ಹಿಂದೆ ಆತ್ಮಹತ್ಯೆಗೀಡಾದ ಜನರ ಅವಶೇಷಗಳು ಅಲ್ಲಲ್ಲಿ ಹರಡಿರುವುವು. ಎಷ್ಟೋ ಜನರು ಸರ್ವಸ್ವ ದಾನ ಮಾಡಿ ಇಲ್ಲಿ ಮೋಕ್ಷದಾಸೆ ತಳೆದರಂತೆ! ಚಕ್ರವರ್ತಿ ಹರ್ಷವರ್ಧನನು ಗಂಗೆಯ ಈ ತಟದಲ್ಲಿ ಐದು ವರ್ಷಕ್ಕೊಮ್ಮೆ ಮಹಾ ವಿಜೃಂಭಣೆಯ ಪೂರ್ವಕವಾಗಿ ಬಡಬಗ್ಗರಿಗೆ ವಿಪುಲವಾಗಿ ದಾನ ಮಾಡುತ್ತಿದ್ದನಂತೆ! ಅನ್ನ ಸಂತರ್ಪಣೆಗಂತೂ ತೆರಪೇ ಇರಲಿಲ್ಲ!

ಹರಿದ್ವಾರದ ಕುಂಭ ಮೇಳದಂತೆ ಇಲ್ಲಿ ಜನೇವರಿ ತಿಂಗಳಲ್ಲಿ ಮಾಘ ಮೇಳ ನಡೆಯುವುದು. ಸೂರ್ಯ ಮಕರ ರಾಶಿಗೆ ಬಂದಾಗ ಆ ಉತ್ಸವ. ಆದರೆ ಆರು ವರುಷ ನಡೆಯುವ ಉತ್ಸವ ಇದು. ಕುಂಭ ಮೇಳ ಇದ್ದ ವರ್ಷ ಮಾತ್ರ ಇಲ್ಲ (ಹನ್ನೆರಡನೆಯ ವರ್ಷ)

**ಜನತೆಯ ನುಚ್ಚುನೂರು :**

ಪರ್ವ ಕಾಲಗಳಲ್ಲಿ ಸಂಗಮ ಸ್ಥಳಗಳಿಗೆ ಹತ್ತರಿಂದ ಇಪ್ಪತ್ತು ಲಕ್ಷದವರೆಗೆ ಜನರು ಬರುವರು. ೧೯೫೪ ರಲ್ಲಿ ಜರುಗಿದ ಕುಂಭಮೇಳ ಬಲು ಅಚ್ಚುಕಟ್ಟಾಗಿ ನಡೆಯಿತು. ಆದರೆ ಆನೆ, ಪಲ್ಲಕ್ಕಿರಥ ಚಕ್ರಗಳಿಗೆ ಸಿಕ್ಕು ಕೆಲವೇ ಕ್ಷಣಗಳಲ್ಲಿ ಬಹು ಜನರು ನುಚ್ಚು ನೂರಾದರು! ಇಂಥ ಮಂಗಲಕರ ಸಮಯದಲ್ಲಿ, ಸ್ಥಳದಲ್ಲಿ ಅವರಿಗೆ ಮರಣ ಸನ್ನಿಹಿತವಾಯಿತೆಂದು ಮಿಡುಕು ಉಂಟಾಗಲಿಲ್ಲವಂತೆ!

ಮಕರ ಸಾಂಕ್ರಾತಿಯ ದಿನ– ಜನವರಿ ಹದಿನಾಲ್ಕರಂದು –ಧ್ವನಿವಾಹಕ, ಗಂಟೆಗಳ ಧ್ವನಿಗಳ ಮಧ್ಯ ಅಸಂಖ್ಯಾತ ಜನರು ಕೂಡುವರು. ನ್ಯಾಯಾಧೀಶರು, ಸೇನಾಧಿಕಾರಿಗಳು, ವ್ಯಾಪಾರಿಗಳು, ಪುರೋಹಿತರು, ಪರ

ದೇಶದಿಂದ ಆಗಮಿಸಿದ ಜನರನ್ನು ನಾವು ಅಲ್ಲಿ ಕಾಣಬಹುದು.

ವರ್ಷದಾದ್ಯಂತವೂ ಗಂಗಾ ನದಿಯ ತೀರದ ಮೇಲೆ ಪೂಜೆ ನಡೆದೇ ಇರುವದು. ಶೈವ ಪಂಥ ಕ್ಷೇತ್ರ ಕಾಶಿ ಮೇಲೆ ಅಶ್ವಮೇಧ ಯಾಗಗಳು ನಡೆದ ಸ್ಥಳ ಆ ಪರಿಸರದಲ್ಲಿ ಸುಮಾರು ಏಳು ನೂರು ದೇವಾಲಯಗಳಿರುವವು.

**ಸ್ನಾನದ ಘಟ್ಟಗಳು :**

ಬನಾರಸದಲ್ಲಿ ಐದು ಶ್ರೇಷ್ಠ ಘಟ್ಟಗಳಿರುವವು. ಕ್ಲುಪ್ತ ಕಾಲಾವಧಿಲ್ಲಿ ಅವುಗಳನ್ನು ಸಂದರ್ಶಿಸುವ ಪರಂಪರೆಯುಂಟು. ಪಂಚಗಂಗಾ ಸಂಗಮ ಪ್ರದೇಶ ಇವುಗಳಲ್ಲೊಂದು. ನಗದಲ್ಲಿಯೇ ೭೪ ಘಟ್ಟಗಳು! ಇಲ್ಲಿ ಶವಗಳ ದಹನ ನಡೆಯುವದು. ಸೈಕಲ್ ರಿಕ್‌ಶಾಗಳಲ್ಲಿ ಶವಗಳನ್ನು ಹೊತ್ತು ತರುವರು.

ಗಂಟೆಗಳ ನಿನಾದ ಆಗಸ ಭೈದಿಸುವಾಗ ಆ ಸೂರ್ಯಾಸ್ತ ಸಮಯದಲ್ಲಿ ನದಿಗೆ ಆರತಿ ಬೆಳಗುವರು. ಹೂಗಳನ್ನು ಏರಿಸುವರು. ಮಿಠಾಯಿ ನೈವೇದ್ಯ. ಹೀಗೆ ಬನಾರಸದಿಂದ ಮುನ್ನಡೆದ ಕೆಳಗೆ ಬಂದಾಗ ಬಿಹಾರದಲ್ಲಿ ಜಹಾಗಿರ ದ್ವೀಪ ಕಾಣುವದು. ನೀರ ಮೇಲೆ ಎಪ್ಪತ್ತು ಅಡಿ ಎತ್ತರದ ಬಂಡೆಗಲ್ಲುಗಳಿರುವವು. ಅದು ಗಂಗೆಯ ಉತ್ತರವಾಹಿನಿ. ಗರಿಬಿನಾಥ ದೇವಾಲಯ ಶಿವ ಸನ್ನಿಧಾನಕ್ಕೆ ಹೆಸರಾದುದು. ವಿಷ್ಣು ದೇವನ ಕೆತ್ತನೆಯ ಚಿತ್ರಗಳೂ ಇಲ್ಲಿ ಇವೆ. ಬಂಡೆಗಲ್ಲುಗಳ ಮೇಲೆ ಬುದ್ಧ, ಪರಶುರಾಮರ, ಮೂರ್ತಿಗಳನ್ನು ಕಟೆದಿರುವರು.

**ಆಕರ್ಷಕ ನೋಟ :**

ಇಲ್ಲಿಂದ ಕೋಲ್ಗಂಜಕ್ಕೆ ನೌಕಾಯಾನ ಆಹ್ಲಾದಕರವಾದುದು. ಕೆಳಗೆ ಬಂದರೆ ವನಪ್ರದೇಶದಲ್ಲಿ ಬಾಬಾ ಜನರ ವಿಗ್ರಹಗಳುಂಟು. ೮೪ ಶಿಲಾಪ್ರತಿಮೆಗಳು ಕಣ್ಣಿಗೆ ಬೀಳುವವು. ಅಲ್ಲಿಯೇ ಅರ್ಧಮರ್ಧ ವಿರೂಪಗೊಂಡ ಬುದ್ಧ ಮೂರ್ತಿ ಇರುವದು. ಮುಂದೆ ೮೦ ಮೈಲಿ ಕ್ರಮಿಸಲು ಭಾಗೀರಥಿ ನದಿ ಕಲ್ಕತ್ತೆಯೆಡೆಗೆ ಹೊರಟು ಅಲ್ಲಿ "ಹುಗುಳಿ" ಎನಿಸಿಕೊಳ್ಳುವದು. ಅಲ್ಲಿಂದ ಭಾರತದ ರಾಜಕೀಯ ಇತಿಹಾಸ ಮುಂದಿನ ರೋಮಾಂಚಕವೇ!

**ಯಾತ್ರೆಯ ಅಂತಿಮ ದಿಸೆ**

ಕೊನೆಗೆ ಇಳುಕಲ ಪ್ರವಾಹದಲ್ಲಿ ಕ್ರಮಿಸುವಾಗ ಹೌರಾ ಸೇತುವೆ ಹತ್ತುವದು. ಬ್ರಿಟಿಶ್ ಕೌಶಲಕ್ಕೆ ಭವ್ಯ ಸಜೀವ ನಿದರ್ಶನ. ಬಸ್, ಟ್ರಾಮ್, ಟ್ಯಾಕ್ಸಿ, ನಡೆದಾಡುವ ಜನ-ಎಲ್ಲ ಗದ್ದಲದ ಆಗರ ಅದು. ಜಾತ್ರೆಗಳ ಗುಜಗುಜು ಕೂಡ ಮೀರಿಸುವಂತಹದು! ಅಲ್ಲಲ್ಲಿ ಇಲ್ಲಿ ಕೂಡ ದೇವಾಲಯಗಳು ಪಸರಿದ್ದರೂ ವಿಶೇಷ ಪಾವಿತ್ರ್ಯದ ಸೊಂಕು ಇರದು.

ಸಿದ್ಧಗಂಗಾ

**ಮೋಹನಾಂಗಿ ಲವಂಗಿ :**

ಸಾಗರ ದ್ವೀಪದ ಬಳಿ ಹುಗಳಿ ಸಮುದ್ರ ಕೂಡುವದು. ಉಸುಕಿನ ತೀರ ಸ್ಥಳಗಳಲ್ಲಿ ಜಾತ್ರೆಗಳು ನಡೆಯುವವು. ಸಗರ ರಾಜನ ಅರವತ್ತು ಸಾವಿರ ಮಕ್ಕಳ ವಿಮೋಚನೆಯ ಸಂಕೇತವಾಗಿ ಜನರು ನೀರಲ್ಲಿ ಮುತ್ತು ರತ್ನಗಳನ್ನು ತೂರುವರು. ಗಂಗಾ ನದಿ ರೇವೆಯ ಮಣ್ಣನ್ನು ತಂದು ನೂರಾರು ಮೈಲಿ ಹರಡುವದು. ಆದರೆ ಅದರ ಉಗಮದಾತೆ ಕೊನೆ ಕೂಡ ಕಾಣದು! ಇದೀಗ ಪರಮ ಪಾವನ ಗಂಗಾ ಮಾತೆಯ ಕತೆ! ಪಂಡಿತ ರಾಜ ಜಗನ್ನಾಥ ಆತನ ಮೋಹನಾಂಗಿ ಲವಂಗಿಯನ್ನು ಉದ್ಧಾರಿಸುವ ಪೂಜ್ಯ ಮಾತೆಯ ಮಹಾ ಕತೆ! —

[ರಘುವೀರ ಸಿಂಹರ - "Sacred River of India" ಗ್ರಂಥದಿಂದ ಆಧರಿಸಿದುದು]

---

( 11 ನೇ ಪುಟದಿಂದ )

ವಿಚಾರ ಮಾರುಕಟ್ಟೆಯ ಸಮೀಕ್ಷೆ ಮಾರಾಟದ ವ್ಯವಸ್ಥೆ ಸಾಲದ ಸೌಲಭ್ಯಗಳ ಬಗ್ಗೆ ತೀವ್ರ ಪ್ರಚಾರ ಮಾಡುವುದು ಅವಶ್ಯ. ಈಬಗ್ಗೆ ಮಾಧ್ಯಮಗಳಿಗೆ ಸೂಕ್ತ ಮಾಹಿತಿ ಒದಗಿಸಬೇಕು.

ಒಟ್ಟಿನಲ್ಲಿ ಇಂದು ಕೃಷಿ ವಸ್ತುಗಳು ಇಳಿಮುಖವಾಗಿರುವುದು ರೈತರಲ್ಲಿ ಕಳವಳವನ್ನುಂಟು ಮಾಡಿವೆ. ಅಧಿಕ ಆಹಾರ ಉತ್ಪಾದನೆಯಿಂದ ರಾಷ್ಟ್ರ ಸ್ವಾವಲಂಬನೆ ಪಡೆಯಲು ಸಾಧ್ಯವಾಗಿದೆ. ಅಧಿಕ ಉತ್ಪಾದನೆ ಮಾಡಿದ ರೈತ ಮಾತ್ರ ಸಂಷ್ಟಕ್ಕೊಳಗಾಗಿದ್ದಾನೆ. ಈ ಪ್ರಸಂಗದಲ್ಲಿ ರೈತರಿಗೆ ಶಿಕ್ಷಣ ಪರಿಹಾರ ನೀಡುವುದು ಅವಶ್ಯ. ದೇಶ ಬೇಡಿಕೆಗೆ ಅನುಗುಣವಾಗಿ ಬೆಳೆಗಳ ಯೋಜನೆ ಮುನ್ಸೂಚನೆ ಬೆಂಬಲ, ಬೆಲೆಗಳನ್ನೊಳಗೊಂಡ ದೀರ್ಘಾವಧಿ ಬೆಲೆ ದೊರಣೆ ಸಮರ್ಪಕ ಸಂಗ್ರಹದ ವ್ಯವಸ್ಥೆ, ಹಣದ ಪೂರೈಕೆ ಬೆಳೆಯ ವೆಚ್ಚದ ಆಧಾರದ ಮೇಲೆ ಬೆಲೆಗಳನ್ನು ನಿರ್ಧರಿಸುವುದು ಅವಶ್ಯ. ಅಲ್ಲದೆ ಸಾಮೂಹಿಕ ಪ್ರಚಾರ ಮಾಧ್ಯಮಗಳಾದ ರೇಡಿಯೋ ಮತ್ತು ವೃತ್ತಪತ್ರಿಕೆ ಮೂಲಕ ಬದಲಾದ ಆರ್ಥಿಕ ಪರಿಸ್ಥಿತಿಗೆ ಹೊಂದಿಕೊಳ್ಳುವ ಬೆಳೆಗಳಿಗೆ ತಗಲುವ ವೆಚ್ಚ ಬೆಲೆಗಳ ಇಳಿತಕ್ಕೆ ಕಾರಣ, ಪ್ರೋತ್ಸಾಹಿತ ಬೆಂಬಲ ಬಗ್ಗೆ ನಿರ್ಧಾರ ಸಂಗ್ರಹಕ್ಕಾಗಿ ಹಣದ ಪೂರೈಕೆ ಮುಂತಾದವುಗಳ ಬಗ್ಗೆ ಪ್ರಚಾರ ಮಾಡಿ ಬದಲಾದ ಪರಿಸ್ಥಿತಿಯಲ್ಲಿ ಹೊಂದಿಕೊಡು ಹೋಗಲು ರೈತನಿಗೆ ಸಹಾಯಮಾಡುವುದು ಅವಶ್ಯವಾಗದೆ. ಇಂಥ ಶಾಶ್ವತ ಪರಿಹಾರ ಇಡಲು ಸಾಧ್ಯ. ನಾವು ರೈತನಿಗೆ ಸಹಾಯಮಾಡುವಲ್ಲಿ ಕರ್ತವ್ಯಚ್ಯುತರಾದರೆ ರಾಷ್ಟ್ರವೇ ಕಂಗಾಲು ಪರಿಸ್ಥಿತಿಯನ್ನು ಎದುರಿಸಬೇಕಾದೀತು. —

"SIDDAGANGA" Monthly, Sree Siddaganga Mutt. KRN Q-9
Registered with the Registrar of News papers for India under No. 17139/69



ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ ಶ್ರೀ ಸಿದ್ಧಗಂಗಾ ಮಠ.